ವಿಜಯತಾಂ ಧರ್ಮಃ

ಓಮ್ ॥ ಶ್ಲೋ ॥ ಯಃ ಪೃಥಗ್ಧರ್ಮಚರಣಾಃ ಪೃಥಗ್ಧರ್ಮಫಲೈಷಿಣಃ । ಪೃಥಗ್ಧರ್ಮೈಃ

ಸದ್ವೃತ್ತರತ್ನಾವಳಿಯ ಮಧ್ಯಮಮಣಿಯಾದ

ಸನಾತನಾರ್ಯಧರ್ಮಸಾರದಲ್ಲಿ

# ಧರ್ಮಪ್ರಶ್ನೆ ೨.

---

ಇದು

ಶ್ರುತಿ ಸ್ಮೃತೀತಿಹಾಸ ಪುರಾಣಸಾರಾಂಶವಾಗಿ

ಸದ್ವೃತ್ತಸಭ್ಯರ ಇಷ್ಟಾನುಸಾರವಾಗಿ ಸನಾತನಾರ್ಯಧರ್ಮಜಿಜ್ಞಾಸುಗಳ

ಬೋಧನಕ್ಕೋಸ್ಕರವಾಗಿ ಬೆಳ್ಗನ್ನಡದಿಂದ

ಬೆಂಗಳೂರು ಕಲಾಶಾಲಾ ಪಂಡಿತರಾದ

ಗ. ವೈ. ಕೃಷ್ಣಾಚಾರ್ಯರಿಂದ

ರಚಿಸಲ್ಪಟ್ಟಿದೆ.

---

ಬೆಂಗಳೂರು

ಒಕ್ಕಲಿಗರ ಸಂಘದ ಮುದ್ರಾಲಯ, ೧೯೦೯.

ಬೆಲೆ ೦-೧-೬ | ಕ್ರಯ ೧ ಚಿಕ್ಕ [illegible]

ಕ್ರಿಯತಾಂ ಧರ್ಮಃ

ಓಂ

# A Catechism of Sanātanārya Dharma Sāra.

## ಸದ್ವೃತ್ತ ರತ್ನಾವಳಿಯ ಸನಾತನಾರ್ಯ ಧರ್ಮಸಾರದಲ್ಲಿ

## ಕರ್ಮಪ್ರಶ್ನೆ ೧ ನೆಯ ಭಾಗ.

---

ಅಂತೇವಾಸಿಯ ಅನುಯೋಗ (ಶಿಷ್ಯನಪ್ರಶ್ನೆ) :–ಕರ್ಮವೆಂದರೇನು? ಎಷ್ಟು ಬಗೆಯಾಗಿದೆ ?

ಉಪಾಧ್ಯಾಯನ ಉತ್ತರ :–ಕರ್ಮವೆಂದರೆ ಕ್ರಿಯೆ, ಕೆಲಸ, ಪ್ರಪಂಚಕ್ಕೆಲ್ಲಕ್ಕೂ ಸೃಷ್ಟ್ಯಾದಿಯಿಂದಲೂ ಸಹಜವಾಗಿ ಬಂದಿರುವ ಚೇಷ್ಟೆ. ಇದು ಇಷ್ಟು ಬಗೆಯಾಗಿದೆ ಎಂದು ಬಾಯಿಂದ ಹೇಳಲು ಶಕ್ಯವೆ ? ಚಲಿಸುವುದು, ಅವಿರುವುದು, ಅಲ್ಲಾಡುವುದು, ಮೇಲಕ್ಕೇರುವುದು, ಕೆಳಗಿಳಿಯುವುದು, ಅಡ್ಡವಾಗಿ ಹೋಗುವುದು, ಸುತ್ತುವುದು, ಸಣ್ಣನಾಗುವುದು, ದೊಡ್ಡದಾಗುವುದು, ಮುಚ್ಚುವುದು, ತೆರೆಯುವುದು, ಉಸಿರುಬಿಡುವುದು, ನುಡಿವುದು, ನಡೆವುದು, ಆಡುವುದು, ನೋಡುವುದು, ಮೂಸಿಸುವುದು, ತಿನ್ನುವುದು, ಸದ್ದುಕೇಳುವುದು, ಆಲೋಚಿಸುವುದು–ಹೀಗೆ ಹೇಳಿ ತೀರದಾದುದರಿಂದ ಹುಟ್ಟುವುದು, ಬೆಳೆಯುವುದು, ಸಾಯುವುದು ಎಂದು ಹೇಳಿ ಮುಗಿಸಬೇಕಾಗಿದೆ.

ಅ–ಸರಿ. ಪ್ರಪಂಚದಲ್ಲಿ ಪ್ರಾಣಿವರ್ಗದ ಚೇಷ್ಟೆಗಳನ್ನು ಕರ್ಮವೆನ್ನುವುದು ಸಹಜ. ಪ್ರಾಣವಿಲ್ಲದ ಕದಲುವ ಶಕ್ತಿಯೇ ಇಲ್ಲದಂತಹ ಜಡವಸ್ತುಗಳಿಗೆ ಕರ್ಮವೆಲ್ಲಿಯದು ? ಜನ್ಮವೆಲ್ಲಿಯದು ?

ಉ–ಅವಕ್ಕೂ ಕರ್ಮವುಂಟು, ಜನ್ಮವೂ ಉಂಟು. ಕರ್ಮಶೇಷದಿಂದಲೇ ಈಗ ಅವು ಜಡವಾಗಿರುವುವು. ಕಾಲಾಂತರಕ್ಕೆ ಚೇತನಭಾವವನ್ನೂ ಹೊಂದಬಹುದು. ಈಗ ಅವುಗಳಲ್ಲಿ ನಮ್ಮಲ್ಲಿರುವಂತೆ ಸ್ಪಷ್ಟವಾಗಿ ಪ್ರಾಣವಾಯುಕಾರ್ಯವು ಹೊರಗೆ ಕಾಣಬಾರದಿದ್ದರೂ ಸೂಕ್ಷ್ಮವಾಗಿ ಭೂತವಾಯುವಿನ ಕಾರ್ಯವಿರುವುದು. ಅದೂ ಗೋಚರವಿಲ್ಲದ ಕಡೆಯಲ್ಲಿ ಪ್ರಕೃತಿಯಲ್ಲಿ ಅನುಪ್ರವೇಶವಾಡಿರುವ ಪರಮಾತ್ಮನ ಸತ್ತಾಮಾತ್ರರೂಪವಾದ ಆ ಸಹಜಧರ್ಮವೊಂದು ಎಲ್ಲೆಲ್ಲಿಯೂ ಇದ್ದೇ ಇರುವುದೆಂದು ತಿಳಿಯಬೇಕು.

ಅ–ಸತ್ತಾರೂಪವೆಂದರೇನು ? ಅದು ಎಲ್ಲಿ ಹೇಗಿರುವುದು ?

ಉ–ಇರುವಿಕೆ, ಇರವು, ಎಂಬಲ್ಲಿ ತೋರುವ ಇರ್ ಎಂಬ ಧಾತ್ವರ್ಥವೇ ಸತ್ತಾರೂಪವು. ಉದಾ–ಹೊಲವಿದೆ, ನೆಲೆಯಿದೆ, ಹಾಲಿದೆ, ಮೊಸರಿದೆ, ಎಂಬಲ್ಲಿ ಇರುವಿಕೆ ಎಂಬ ಕ್ರಿಯೆ ಒಂದುಂಟಷ್ಟೆ!

ಅ–ಉಂಟು. ಹಾಗೆ ಹೇಳುವುದು ಲೋಕರೂಢಿಮಾತ್ರವೇ.

ಉ–ಸರಿ. ಆ ಲೋಕರೂಢಿಯೇ ಈಗ ತಿಳಿಯಬೇಕಾಗಿರುವುದು :–ಆ ಹೊಲ, ನೆಲೆ, ಹಾಲು, ಮೊಸರುಗಳು ಕಾಲವಶವಾಗಿ ಪರಿಣಾಮವನ್ನು ಹೊಂದುತ್ತ ಇರುವಿಕೆಯೇ ಅವುಗಳ ಧರ್ಮವು; ಆ ಧರ್ಮವೇ ಅವುಗಳಲ್ಲಿ ಇರುವ ಕ್ರಿಯಾಶಕ್ತಿಯು, ಅದೇ ಅವಕ್ಕೆ ಕರ್ಮವು. ಅದಕ್ಕೆ ಹೇತು ಪ್ರಕೃತಿ. ಆ ಪ್ರಕೃತಿಯ ಸತ್ತೆಯು ಪರಮಾತ್ಮಾಧೀನವು. ಹೀಗೆ ಗ್ರಹಿಸಬೇಕು.

ಅ–ಇದೇನೋ ಗಹನವಾಗಿದೆಯಲ್ಲ. ಈ ಪ್ರಕೃತಿ, ಪರಮಾತ್ಮ, ಇವೆರಡನ್ನೂ ಬೇರೆ ವಿಂಗಡಿಸಿಕೊಳ್ಳುವುದೇ ಕಷ್ಟವಾಗಿದೆ. ಆ ತತ್ತ್ವಗಳ ಸತ್ತೆ ಎಲ್ಲಿ ತಿಳಿಯುತ್ತದೆ ?

ಉ–ಅಹುದು. ಅದು ಕಷ್ಟವಾದ ವಿಷಯವೇ ಸರಿ. ಆ ತತ್ತ್ವನಿರ್ಣಯಕ್ಕಾಗಿಯೇ ಇಷ್ಟು ವಿಚಾರವು. ಚೆನ್ನಾಗಿ ಏಕಾಗ್ರಚಿತ್ತನಾಗಿ ಮನನಮಾಡಿದ ಹೊರತು ಗೊತ್ತಾಗುವುದಿಲ್ಲ.

ಅ–ಈ ಕರ್ಮವಿಷಯದಲ್ಲಿ ಇದು ಪ್ರಕೃತಿಯದು, ಇದು ಪರಮಾತ್ಮನದು, ಎಂದು ಗ್ರಹಿಸಿಕೊಳ್ಳುವುದು ಹೇಗೆ ?

ಉ—ಅಯ್ಯಾ ಕೇಳು! ಹಾಲಿನಲ್ಲಿ ನೀರಿನ ಭಾಗವು ತುಪ್ಪದ ಭಾಗವು ಎರಡು ಇವೆಯಲ್ಲವೆ ? ಅವೆರಡು ಅಂಶಗಳನ್ನು ಬೇರ್ಪಡಿಸಿಕೊಳ್ಳುವಂತೆ ಯೇ ಮಥನ ಮಾಡಿಮಾಡಿ ಕೊಂಚಕೊಂಚವೇ ಗ್ರಹಿಸುತ್ತಬರಬೇಕು. ಧರ್ಮಪ್ರಶ್ನೆಯಲ್ಲಿ ೨೫ ಪುಟದಿಂದ ೩೦ ವರೆಗೂ ೫೬—೫೭ ರಲ್ಲಿಯೂ ಸೂಚಿಸಿರುವುದನ್ನು ನೋಡಿರಿ. ಮತ್ತು ದೀರ್ಘಾಯುಸ್ಸೂತ್ರಾಂತದಲ್ಲಿರುವ “ಪ್ರಕೃತಿ ಪುರುಷ ವಿವೇಕ” ಎಂಬ ಭಾಗವನ್ನು ಇನ್ನೊಂದುಸಲ ನೋಡಿರಿ.

ಅ—ಸರಿ. ಆಗಲಿ. ಈಗ ಅದರ ಕ್ರಮವನ್ನೇ ಇನ್ನು ಸ್ವಲ್ಪ ವಿವರಿಸಿ ಹೇಳಬೇಕು.

ಉ—ಕೇಳು. ಪರಮಾತ್ಮನು ಶುದ್ಧ ಸಚ್ಚಿದಾನಂದಮಯನೆಂದು, ಪ್ರಕೃತಿಯು ಸತ್ತ್ವರಜಸ್ತಮೋ ಗುಣಮಯವೆಂದು, ಗುಣಮಯವಾದೀ ಪ್ರಕೃತಿಯು ಗುಣಾತೀತನಾದ ಆ ಪರಮಾತ್ಮನ ವಶದಲ್ಲಿರುವುದೆಂದು, ಮತ್ತು ಈ ಪ್ರಕೃತಿಯಲ್ಲಿ ತೋರಿಬರುವ ಸರ್ವ ಕರ್ಮಗಳು ಆತನ ಅದ್ಭುತವಾದ ಶಕ್ತಿಯಿಂದುಂಟಾಗಿರುವುವೆಂದು ಭಾವಿಸಿರಿ.

ಅ—೧ ಆತನ ಶಕ್ತಿಗಳು ಎಷ್ಟಿವೆ? ೨ ಯಾವ ರೂಪಗಳಾಗಿವೆ ? ೩ ನಾವು ಅದನ್ನು ಮನನಕ್ಕೆ ತಂದುಕೊಳ್ಳಲು ಉಪಾಯವೇನುಂಟು ? ಈ ವಿಷಯಗಳನ್ನು ವಿವರಿಸಬೇಕು.?

ಉ—ಅಯ್ಯಾ! ನಿನ್ನ ಪ್ರಶ್ನೆಗಳು ಬಹುಶಾಸ್ತ್ರವಿಷಯಗಳನ್ನೊಳಕೊಂಡಿವೆ. ಸಂಕ್ಷೇಪೋತ್ತರದಿಂದ ಸಂದೇಹನಿವೃತ್ತಿಯು, ಸಂತೃಪ್ತಿಯು, ಆಗದೆಂದು ತೋರುತ್ತದೆ. ಆದರು ಮನನಕ್ಕೋಸ್ಕರವಾಗಿ ಲಕ್ಷ್ಯದಲ್ಲಿರಿಸಿಕೊಳ್ಳಲು ಒಂದೆರಡು ವಾಕ್ಯವಂ ಹೇಳುವೆನು ಕೇಳು. ೧. ಆ ಪರಮಾತ್ಮನ ಶಕ್ತಿಗಳು ಅನಂತಗಳು ಅಚಿಂತ್ಯಗಳು ಅದ್ಭುತಗಳು ಆಗಿರುವುದರಿಂದ ಇಷ್ಟೆಂದು ಎಣಿಸಲಶಕ್ಯವು. ಈ ಭೂಮಿಯ ಅಣುರೇಣುಗಳನ್ನು, ಆಕಾಶದಲ್ಲಿ ನಕ್ಷತ್ರಗಳನ್ನು, ಎಣಿಕೆಗೆಯ್ಯಲು ಶಕ್ಯವೆ ? ಬ್ರಹ್ಮಾದಿದೇವತೆಗಳಿಗೂ, ವೇದಗಳಿಗೂ, ಆತನ ಮಹಿಮೆ ಪೂರ್ಣವಾಗಿ ತಿಳಿಯದೆನ್ನುವಾಗ ಅಲ್ಪಜ್ಞರಾದ ನಮ್ಮ ಪಾಡೇನು ? ಸರ್ವಸತ್ತೆಯು ಆತನದೇ ಎಂದು ತಿಳಿಯಬೇಕು.

೨. ಆ ಸತ್ತಾಶಕ್ತಿ ಯಾವ ರೂಪವೆಂದರೆ :—ಆ ಪರಮಾತ್ಮನ ಸಾನ್ನಿಧ್ಯ ಮಾತ್ರದಿಂದ ಈ ಪ್ರಾಕೃತಪದಾರ್ಥಗಳಲ್ಲಿ ಏನೊಂದು ಅತಿಶಯವು, ಮಹಿಮೆಯು, ವೈಭವವು, ಲೋಕಕ್ಕೆ ತೋರಿಬರುತ್ತ ಅರ್ಥಕ್ರಿಯಾಕಾರಿಯಾಗಿರುವುದೋ ಅವೆಲ್ಲವು ಆತನ ಸತ್ತೆ—ಎಂದರೆ—ಭೂಮಿಯಲ್ಲಿ ಸುಗಂಧ, ಜಲದಲ್ಲಿ ಮಧುರರಸ; ತೇಜಸ್ಸಿನಲ್ಲಿ ಸುಡುವ, ಬೆಳಕಾಗುವ ಶಕ್ತಿ; ವಾಯುವಿನಲ್ಲಿ ಪ್ರಾಣಶಕ್ತಿ; ಆಕಾಶದಲ್ಲಿ ಶಬ್ದ; ಬುದ್ಧಿಯುಳ್ಳವರಲ್ಲಿ ಬುದ್ಧಿ, ಇಂದ್ರಿಯಗಳಲ್ಲಿ ಮನಸ್ಸು, ಭೂತಗಳಲ್ಲಿ ಚೇತನವು, ಹೀಗೆ ಕಾಲ, ಮೃತ್ಯು, ಶ್ರೀ, ವಾಕ್ಕು, ಕೀರ್ತಿ, ಸ್ಮೃತಿ, ಧೃತಿ, ತೇಜಸ್ಸು, ಓಜಸ್ಸು, ಜಯ, ಸತ್ತ್ವ, ನಿಶ್ಚಯ, ನೀತಿ, ಮೌನ, ಜ್ಞಾನ, ಇತ್ಯಾದ್ಯನಂತ ವೀರ್ಯಗಳು, ಗುಣಗಳು, ಅತಿಶಯಗಳು ಆತನ ಸದ್ರೂಪಚಿದ್ರೂಪಗಳ ಒಂದು ಲವಾಂಶವೆಂದು ಭಾವಿಸಬೇಕು. ಇನ್ನೂ ಹೀಗೆ ಲೋಕದಲ್ಲಿ ಯಾವ ಯಾವುದು ಉತ್ತಮವಾದ ಕಾಂತಿ ಸಂಪತ್ತು ಅಭಿವೃದ್ಧಿ ಸಾರಗುಣ ಉಳ್ಳದಾಗಿವೆಯೋ ಅದೆಲ್ಲವು ಆತನ ಶಕ್ತಿಯ ಒಂದೇ ಅಂಶದಿಂದುಂಟಾಗಿದೆಯೆಂದು (ಭಾಗವತ ೧೧—೧೬) ಹೇಳಿದೆ.

" ತೇಜಃ ಶ್ರೀಃ ಕೀರ್ತಿರೈಶ್ವರ್ಯಂ ಹ್ರೀ ಸ್ತ್ಯಾಗಃ ಸೌಭಗಂ ಭಗಃ ।
ವೀರ್ಯಂ ತಿತಿಕ್ಷಾ ವಿಜ್ಞಾನಂ ಯತ್ರ ಯತ್ರ ಸ ಮೇಂಶಕಃ ॥ ೪೦ ॥ "

(ಕಾಂತಿ, ವೀರ್ಯ, ಬಲ, ಸಂಪತ್ತು, ಯಶಸ್ಸು, ಅಧಿಕಾರ, ನಾಚಿಕೆ ಔದಾರ್ಯ, ಸೌಂದರ್ಯ, ಶುಭ, ಭಾಗ್ಯ, ಪರಾಕ್ರಮ, ಸೈರಣೆ, ಬಿನ್ನಾಣ, ಇತ್ಯಾದಿಗಳು ಎಲ್ಲೆಲ್ಲಿ ಕಾಣಬಂದರೂ ಅವೆಲ್ಲವು ನನ್ನ ಅಂಶವೆಂದು ಭಗವದುಕ್ತಿಯೇ ಇರುವುದು ) ಆದರಿಂದ ಎಲ್ಲಿ ಯೇನು ಕಲ್ಯಾಣಗುಣಗಳಿದ್ದರೂ ಆ ಪರಮೇಶ್ವರನ ಸತ್ತಾಂಶವೆಂದು ಭಾವಿಸಬೇಕು.

೩. ಆ ಪರಮಾತ್ಮನ ಸತ್ತಾಶಕ್ತಿಯನ್ನು ಮನನಕ್ಕೆ ತರಲು ಉಪಾಯವು—ಬುದ್ಧಿಯಲ್ಲಿ ಏಕಾಗ್ರಭಾವದಿಂದ ಶಾಸ್ತ್ರೋಕ್ತಪ್ರಕಾರವಾಗಿ ಅದರ ಪ್ರಭಾವಗಳನ್ನು ಯಾವಾಗಲೂ ಬಿಡದೆ ಎಲ್ಲೆಲ್ಲಿಯು (ಚಿಂತಿಸುವುದು) ಧ್ಯಾನಿಸುವುದೇ ಉಪಾಯವು.

ಆ—ಶಾಸ್ತ್ರದಲ್ಲಿ ಈ ವಿಷಯವು ಎಲ್ಲಿ ಯೇನು ಹೇಳಿದೆ ?

ಉ—ಭಗವತ್ಪ್ರಾರ್ಥನಾಪದ್ಯಗಳಲ್ಲಿಯೇ ಇದೆ, ನೋಡಿರಿ:—

ಶ್ಲೋ || ೧ ಯಥಾಗ್ನಿಮೇಧಸ್ಯ ೨ ಮೃತಂ ಚ ಗೋಷು
೩ ಭುವ್ಯನ್ನಮಂಬೂ ೪ ದ್ಯಮನೇ ಚವೃತ್ತಿಂ|
೫ ಯೋಗೈರ್ಮನುಷ್ಯಾ ಅಧಿಯನ್ತಿ ಹಿ ತ್ವಾಂ
೭ ಗುಣೇಷು ಬುದ್ಧ್ಯಾ ಕವಯೋ ವಿದನ್ತಿ||

(೧ ಕಾಷ್ಠದಲ್ಲಿ ಬೆಂಕಿಯನ್ನು, ೨ ಹಸುವಿನಲ್ಲಿ ಹಾಲುತುಪ್ಪಗಳನ್ನು ೩ ನೆಲದಲ್ಲಿ ಅನ್ನನೀರುಗಳನ್ನು, ೪ ಉದ್ಯೋಗದಲ್ಲಿ ಜೀವನವನ್ನು, ೫ ಮನುಷ್ಯರು ಹೇಗೆ ಉಪಾಯದಿಂದ ಪಡೆಯುತ್ತಿದ್ದಾರೋ ? ೬ ಹಾಗೆಯೇ ವಿದ್ವಾಂಸರು ಸ್ವಬುದ್ಧಿಯಿಂದ ೮ ಜಗದೀಶನಾದ ನಿನ್ನ ಶಕ್ತಿಯನ್ನು ಆ ಗುಣಕಾರ್ಯಗಳಲ್ಲಿ ತಿಳಿಯುತ್ತಿದ್ದಾರೆ.) ಭಾಗವತ ೮—೬೧೨||

ಶ್ಲೋ " ೧ ಕವಿಂ ೨ ಪುರಾಣ ೩ ಮನುಶಾಸಿತಾರ||
೪ ಮಣೋರಣೀಯಾಂಸ ಮನುಸ್ಮರೇದ್ಯಃ |
೫ ಸರ್ವಸ್ಯ ಧಾತಾರ ೬ ಮಚಿಂತ್ಯರೂಪ
೭ ಮಾದಿತ್ಯವರ್ಣಂ ೮ ತಮಸಃ ಪರಸ್ತಾತ್ || ಭ-ಗೀ, ೮—೯
( ಸ ತ ಂ ಪರಂ ಪುರುಷಮುಪೈತಿ ದಿವ್ಯಂ)

(೧ ಸರ್ವಜ್ಞನು, ೨ ಅನಾದಿಪುರುಷನು, ೩ ಸರ್ವಶಿಕ್ಷಕನು, ೪ ಅತ್ಯಂತಾಣುಪ್ರಮಾಣಕನು ಎಂದರೆ ಅವ್ಯಕ್ತಸೂಕ್ಷ್ಮರೂಪನು, ೫ ಸರ್ವ ಚರಾಚರಪ್ರಪಂಚಕ್ಕು ಧಾರಣಪೋಷಣಕರ್ತೃರನ್ನು, ೬ ಸಂಪೂರ್ಣವಾಗಿ ಮನಸ್ಸಿನಿಂದ ಎಣಿಸಲಶಕ್ಯವಾದ ರೂಪವುಳ್ಳವನು, ೭ ಸೂರ್ಯತೇಜಸ್ಸಿನಂತಹ ದಿವ್ಯತೇಜಸ್ಸುಳ್ಳವನು. ೮ ಪ್ರಕೃತಿಸಂಬಂಧ ದೋಷಗಳೊಂದು ಇಲ್ಲದವನು. ಎಂದು ಯಾವನು ಸ್ಮರಿಸುವನೋ ಅವನು ಆ ಪರಮಾತ್ಮನನ್ನೇ

ಸೇರುತ್ತಾನೆ.) ಎಂದು ಹೇಳಿರುವ ಮೇರೆಗೆ ಸದಾಮನಸ್ಸಿನಲ್ಲಿ ಮನನಮಾಡುವುದೇ ಉಪಾಯವು. ಅದೇ ಧ್ಯಾನ ಯೋಗವೆನಿಸಿರುವುದು.

ಅ—ಅದೆಷ್ಟು ವಿಷಯವನ್ನು ಧ್ಯಾನಮಾಡುವಷ್ಟು ಧಾರಣಾಶಕ್ತಿ ನಮಗೆಲ್ಲಿಯದು ? ಸ್ವಲ್ಪವಾಗಿಯು ಲಘುವಾಗಿಯು ಆತನ ಶಕ್ತಿಯನ್ನು ಗ್ರಹಿಸುವ ಉಪಾಯವೇನೂ ಬೇರೇ ಇಲ್ಲವೆ ?

ಉ—ಉಂಟು. ಇಲ್ಲದೆಯೇನು? ಒಂದೇಮಾತಿನಿಂದಲೇ ಗ್ರಹಿಸಿಕೊಳ್ಳಬಹುದಲ್ಲವೆ? ಈ ಸರ್ವ ಚರಾಚರ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆಲ್ಲಕ್ಕೂ ಮೂಲಕಾರಣವಾದ ಶಕ್ತಿ ಅದು ಎಂದರಾಯ್ತು.

ಅ—ಅದು ಸರ್ವಸಾಮಾನ್ಯವಾದ ಸ್ವಭಾವಶಕ್ತಿಯಾಯ್ತಲ್ಲವೆ?

ಉ—ಸರಿ. ಇನ್ನೇನು ? ಅದೊಂದು ಶಕ್ತಿಜ್ಞಾನವಾಗಿದ್ದು ಅದನ್ನು ನಾವು ಮರೆಯದಿದ್ದರೆ ಸಾಕು. ಉಳಿದ ಸರ್ವಶಕ್ತಿಗಳು ಇದರಲ್ಲಿಯೇ ಅಡಗುವುವು.

ಅ—ಅದು ಹೇಗೆ?

ಉ—ಹಿಂದೆ ಧರ್ಮಪ್ರಶ್ನೆ ೧೯—೨೦—೨೧, ಪುಟಗಳನ್ನು ನೋಡಿರಿ. ಈಗ ನಾನು ಹೇಳುವುದನ್ನು ಕೇಳಿರಿ:—ಸ್ವಭಾವ, ಸ್ವರೂಪ, ಸಹಜ, ಎಂಬುದಿದೊಂದೂ ಸ್ವತಂತ್ರವಲ್ಲ. "ಈ ಸ್ವಭಾವ ಇವನದು, ಆ ಸ್ವಭಾವ ಅವನದು, ಅದರ ಸ್ವಭಾವ, ಇದರ ಸ್ವಭಾವ" ಹೀಗೆ ಲೋಕದಲ್ಲಿ ರೂಢಿ ಇರುವುದರಿಂದ ಆ ಸೃಷ್ಟ್ಯಾದಿ ಸ್ವಭಾವಶಕ್ತಿಗೆ ಆಶ್ರಯವಾದ ವ್ಯಕ್ತಿಯೊಂದು ಇದ್ದೇ ಇರಬೇಕಷ್ಟೆ? ಆ ವ್ಯಕ್ತಿಯನ್ನೇ ಪರಮಾತ್ಮನೆಂದು, ಆತನ ಸ್ವಭಾವವನ್ನೇ ಪ್ರಕೃತಿಯೆಂದು ಭಾವಿಸಿರಿ.

ಅ—ಹಿಂದೆ ಸತ್ತಾರೂಪಸಹಜಧರ್ಮವೊಂದು ಎಲ್ಲೆಲ್ಲಿಯೂ ಇದೆಯೆಂದಿರೆ ? ಅದಾವುದು ?

ಉ—ಅದೇ ಇದು. ಈ ಪ್ರಕೃತಿಯಲ್ಲಿ ಕಾಣಬರುವ ಧರ್ಮಿಸತ್ತೆ ಧರ್ಮಸತ್ತೆ, ದ್ರವ್ಯಸತ್ತೆ ಗುಣಸತ್ತೆ, ಕರ್ಮಸತ್ತೆ ಜ್ಞಾನಸತ್ತೆ, ಎಂಬ ಎಲ್ಲಾಸತ್ತೆಗಳಿಗೂ ಆ ಸಚ್ಚಿದಾನಂದಮಯನ ಸದ್ರೂಪವೇ ಕಾರಣವು. ಅದು ಅನಂ

ಶಕ್ತಿಗಳುಳ್ಳುದಾಗಿದ್ದರೂ ಅದರಲ್ಲಿ " ಸ್ವಾಭಾವಿಕೀಜ್ಞಾನ ಬಲಕ್ರಿಯಾಚ " ಎಂದು ಜ್ಞಾನಶಕ್ತಿಯೊಂದು, ಕ್ರಿಯಾಶಕ್ತಿಯೊಂದು, ಇವೆರಡುಮಾತ್ರ ಬಲು ಮುಖ್ಯಗಳಾದುವು. ಇವೆರಡರಲ್ಲಿಯು ಜ್ಞಾನಶಕ್ತಿಯೇ ಮುಖ್ಯತಮವಾದುದು. ಏಕೆಂದರೆ ಜಡಪದಾರ್ಥಗಳಲ್ಲಿ ಕ್ರಿಯಾಶಕ್ತಿಯಿದ್ದರೂ ಜ್ಞಾನಕಲೆ ಇಲ್ಲದುದದಿಂದ ಅವು ಜ್ಞಾನಾಧಿಕರಾದ ಮನುಷ್ಯಾದಿಪ್ರಾಣಿಗಳ ಯಥೇಚ್ಛವಾದ ವಿನಿಯೋಗಕ್ಕೆ ಒಳಪಟ್ಟಿವೆ. ಅದರಿಂದ ಲೋಕದಲ್ಲಿ ಕ್ರಿಯಾಸತ್ತೆ ಜ್ಞಾನಸತ್ತೆ ಎಂಬೆರಡು ಶಕ್ತಿಗಳು ಸರ್ವವ್ಯಾಪಕಗಳಾಗಿವೆ.

ಅ—ಬೆಟ್ಟ, ಗುಟ್ಟ, ಕಂಬ, ಗೋಡೆ, ಮುಂತಾದವರಲ್ಲಿ ಈ ಜ್ಞಾನಶಕ್ತಿ ಕ್ರಿಯಾಶಕ್ತಿಗಳೆಲ್ಲಿ ಕಾಣಬರುತ್ತಿವೆ ?

ಉ—ನಿನ್ನ ಸಂದೇಹವು ಸಹಜವೇ ಸರಿ. ಹಿಂದೆ ಹೀಗೆಯೇ ಮಹರ್ಷಿಗಳು ಸಂಶಯಪಟ್ಟು ಚರ್ಚಿಸಿ ನಿರ್ಣಯಿಸಿದ್ದಾರೆ—ಕೇಳಿರಿ :—ಈ ಪ್ರಪಂಚವೆಲ್ಲವು ಜ್ಞಾನಶಕ್ತಿಯೊಂದರಲ್ಲೇ ಅಡಗಿದೆ ಯೆಂದೊಬ್ಬರು, ಎಲ್ಲವು ಕ್ರಿಯಾತ್ಮಕವಾಗಿಯೇ ತೋರಿಬರುವುದೆಂದೊಬ್ಬರು, ಎರಡೂ ಮಿಳಿತವಾಗಿವೆ ಯೆಂದೊಬ್ಬರು, ಜ್ಞಾನದಿಂದ ಕ್ರಿಯೆ, ಕ್ರಿಯೆಯಿಂದ ಜ್ಞಾನವು, ಒಂದು ಜ್ಞಾನದಿಂದ ಅನೇಕ ಕ್ರಿಯಾಜ್ಞಾನಗಳು, ಒಂದು ಕ್ರಿಯೆಯಿಂದ ಅನೇಕ ಜ್ಞಾನಕ್ರಿಯೆಗಳು, ಪರಸ್ಪರಾಶ್ರಯಭಾವದಿಂದ ಕೂಡಿದ ಒಂದೇ ಶಕ್ತಿಯಾಗಿದೆ ಯೆಂದೊಬ್ಬರು. ಹೀಗೆ ವಾದಿಸುತ್ತ ಕೊನೆಗೆ ಜ್ಞಾನಶಕ್ತಿಯಿಂದಲೇ ಕ್ರಿಯಾಶಕ್ತಿಯುಂಟಾಗಿದೆ ಯೆಂದು ನಿರ್ಣಯಿಸಿರುವರು.

ಅ—ಅದು ಹೇಗೋ ಇನ್ನು ಸ್ವಲ್ಪ ಉದಾಹರಣದೊಡನೆ ವಿವರಿಸಬೇಕು ?

ಉ—ಆಗಲಿ_ಕೇಳು-ಈಗ ಎಲ್ಲೆಲ್ಲಿ ನೋಡಿದರೂ ಅದಿದೆ ಇದಿದೆ, ಅದು ಕಂಬ ಇದು ಗೋಡೆ ಎಂದೇ ಮೊದಲು ಮನದಲ್ಲಿ ತೋರುವುದರಿಂದ ಇದೆ ಯೆಂಬಾಗ ' ಇರವು , ಎಂಬ ಸತ್ತೆಯೊಂದು ಸಿದ್ಧವಾಯಿತಷ್ಟೆ? ಆಸತ್ತಾಸ್ವರೂಪವನ್ನು ಪರೀಕ್ಷಿಸಿದರೆ ಅದು ಪೂರ್ವಕ್ಷಣದಲ್ಲಿದ್ದಂತೆ ಉತ್ತರಕ್ಷಣದಲ್ಲಿಲ್ಲವಲ್ಲ? ವಿಕಾರಿ ಪರಿಣಾಮಿ ಯೆನಿಸಿದೆಯಷ್ಟೆ? ಅದರಿಂದ ನದೀ ನದೀ

ಪ್ರವಾಹದಹಾಗೆ ಪ್ರತಿಕ್ಷಣದಲ್ಲಿಯು ವಿಲಕ್ಷಣವಾಗಿ (ಬೇರೆಯಾಗಿ) ಕಾಣ ಬರುತ್ತಿದೆ–ನೋಡು. ಆದುದರಿಂದ ಪ್ರತಿ ವಸ್ತುವಿನಲ್ಲಿಯು ಏನೋಒಂದು ಚೇಷ್ಟೆ, ಕ್ಷೋಭೆ, ನಡೆಯುತ್ತಲೇ ಇರುತ್ತಿದೆಯೆಂದು ತೋರಿಬರುತ್ತಿದೆ. ಆದರೆ ಆಸತ್ತೆಯು ಚೇಷ್ಟಾರೂಪವೇ ಎನ್ನಲಾಗದು. ಚೇಷ್ಟೆ ಬೇರೆಯಾಗಿಯು, ಸತ್ತೆ ಬೇರೆಯಾಗಿಯು, ಅನುಭವದಲ್ಲಿದೆ. ಹೀಗಿರುವುದರಿಂದ ಎಲ್ಲೆಲ್ಲಿ ಸತ್ತೆಯೊಂದೇ ಅನುವರ್ತಿಸಿದೆಯೊ ಅಲ್ಲಿ ಜ್ಞಾನಶಕ್ತಿಯು, ಎಲ್ಲೆಲ್ಲಿ ಚೇಷ್ಟೆಯೂ ತೋರುವುದೋ ಅಲ್ಲಿ ಕ್ರಿಯಾಶಕ್ತಿಸಹಿತವಾದ ಜ್ಞಾನಶಕ್ತಿಯು ಇದ್ದಂತಾಯ್ತು. ಈಗ ಕಡಲಿದೆ, ಅಡವಿಯಿದೆ, ನೆಲವಿದೆ, ಹೊಲವಿದೆ, ಎಂಬಾಗ (ಇರವು) ಸತ್ತೆಯೊಂದು ತೋರುವುದಷ್ಟೆ? ತದುತ್ತರಕ್ಷಣದಲ್ಲಿ ನೋಡುವಾಗ ಆಸತ್ತೆಯು (ಇರವು) ಬೇರೇ ಬಗೆಯಾಗಿ ಕಾಣಬರುವುದು. ಹಾಗೆ ಭೇದವು ತೋರಿಬರುವುದರಿಂದ ಅದರಲ್ಲಿ ವಿಕೃತಿಕ್ರಿಯೆಯೊಂದು ಆ ಸತ್ತೆಯ ಜತೆಗೆ ಸೇರಿಕೊಂಡಿದ್ದಂತಾಯ್ತು. ಇವೆರಡೆರ ಸೇರಿಕೆಯಿಂದಲೇ ಒಂದು ವಸ್ತು ಸಿದ್ಧಿಸುವುದು. ಆ ವೊಂದುವಸ್ತುವು ಪ್ರತಿಕ್ಷಣವು ವಿಲಕ್ಷಣವೆನಿಸಿ ವಿಕಾರವನ್ನಾಗುತ್ತಿದ್ದರೂ, ಇನ್ನೂ ಅದರಲ್ಲಿ ನಾನಾವಸ್ಥೆಗಳೂ ತೋರಿಬಂದರೂ, ಇದೆ ಇದೆ ಎಂಬ ಅವಸ್ಥೆಯೊಂದುಮಾತ್ರ ಏಕರೂಪವಾಯ್ತಷ್ಟೆ? ಬೇರೆಬೇರೆ ಅವಸ್ಥೆಯಾಗಿ ತೋರುವ ಆವಿಕೃತಿಕ್ರಿಯೆಯಾದರೋ ಏಕರೂಪವಲ್ಲದೆ ಭಿನ್ನಭಿನ್ನಾವಸ್ಥೆಗಳಿಂದ ಕ್ಷಣಿಕವಾಯ್ತು.

ಆದುದರಿಂದ ಎಲ್ಲಿಯಾದರೆ ಸತ್ತೆಯು ಚೇಷ್ಟೆಯಾಗಿ ತೋರಿಬಾರದೋ, ಆ ಯಿರವು ಮಾತ್ರ ನಿತ್ಯವಾಗಿ ಕಾಣುವುದೋ, ಅಲ್ಲಿ ಜ್ಞಾನಶಕ್ತಿಯೊಂದೇ ಇದೆಯೆಂದು ತಿಳಿಯಬೇಕು. ಹಾಗೆಯೇ ಎಲ್ಲೆಲ್ಲಿ ಆ ಯಿರವು ವೊಂದೇ ಅಲ್ಲದೆ ಅದರ ಜತೆಗೆ ಚೇಷ್ಟೆಯು (ಕ್ಷೋಭ) ಅನುವರ್ತಿಸಿ ಆನೇಕವಾಗಿಯು ಅನಿತ್ಯವಾಗಿಯು ಕ್ಷಣಿಕವೆನಿಸಿ ತೋರುವುದೋ ಅಲ್ಲಿ ಮಟ್ಟಿಗೆ ಕ್ರಿಯಾಶಕ್ತಿಸಹಿತವಾಗಿ ಜ್ಞಾನಶಕ್ತಿಯಿದೆ ಯೆಂದು ಭಾವಿಸುತ್ತಬರಬೇಕು. ಅಂತು "ಜ್ಞಾನಶಕ್ತಿ ಯಿದೆ, ಕ್ರಿಯಾಶಕ್ತಿ ಕಾಣಬಾರದು–ವಸ್ತುವಿದೆ ಚೇಷ್ಟೆ ತೋರದು" ಎಂಬ ಅನುಭವವುಂಟಾಗುವುದರಿಂದಲು; ಆ ಜ್ಞಾನ

ಶಕ್ತಿಯೊಂದೇ ಸರ್ವವ್ಯಾಪಕವಾಗಿ ಸತ್ಸ್ವರೂಪ (ಸತ್ಯಾತ್ಮಕ) ವೆನಿಸಿರುವುದರಿಂದಲು; "ಸರ್ವಂ ಖಲ್ವಿದಂ ಬ್ರಹ್ಮ-ನೇಹ ನಾನಾಸ್ತಿ ಕಿಂಚನ, ಸತ್ಯಂಜ್ಞಾನಮನಂತಂ ಬ್ರಹ್ಮ" ಇತ್ಯಾದಿ ಶ್ರುತಿಪ್ರಮಾಣದಿಂದಲು; ಒಂದು ಶಕ್ತಿ ನಿತ್ಯವು, ಸತ್ಯವು, ಶುದ್ಧವು, ವ್ಯಾಪಕವು ಸದೈಕಪ್ರಕಾರವಾದುದು ಆಗಿದೆ; ಮತ್ತೊಂದು ಅನಿತ್ಯವು, ಕ್ಷಣಿಕವು, ವಿಕಾರಿಯು, ವ್ಯಾಪ್ಯವು, ಅನೇಕಪ್ರಕಾರವಾದುದು ಆಗಿದೆ; ಎಂದು ಸಿದ್ಧವಾಯಿತಷ್ಟೆ? ಅದರಲ್ಲಿ ಮೊದಲನೆಯದೇ ಪುರುಷಶಕ್ತಿ, ಎರಡನೆಯದು ಪ್ರಕೃತಿಶಕ್ತಿ; ೧ ನೆಯದು ಸ್ವತಂತ್ರವು, ೨ ನೆಯದು ಪರತಂತ್ರವು, ೧ನೆಯದು ನಿರ್ವಿಕಾರವು, ಅಪರಿಣಾಮಿಯು-೨ನೆಯದು ಸವಿಕಾರವು, ಸದಾಪರಿಣಾಮಿಯು; ೧ ನೆಯದು ಧರ್ಮಿ, ೨ಧರ್ಮವು; ೧ ಚಿತ್ತು ೨ ಅಚಿತ್ತು; ೧ ಚೇತನ ೨ ಜಡ; ೧ ನಿರ್ದೋಷ, ೨ ಸದೋಷ; ೧ ಸತ್ತ್ವ ೨ ತಮಸ್ಸು; ಹೀಗೆ ಪ್ರಪಂಚವೆಲ್ಲವು ಎರಡೇ ಶಕ್ತಿಗಳಲ್ಲಿ ಅಡಗಿ ಇದೆ ಯೆಂದು ಭಾವಿಸಿರಿ.

ಅ-ಸರಿ. ಹಿಂದೆ ಪರಮಾತ್ಮನ ಸತ್ತಾರೂಪಧರ್ಮವೆಂದು ಹೇಳಿದ್ದಿರೆ? ಅಲ್ಲಿ 'ಸತ್ತಾ' ಎಂಬುದೇನು ರೂಢವೇ? ಧಾತ್ವರ್ಥವು ಉಂಟೆ?

ಉ—ಉಂಟು. ಇನ್ನಲ್ಲಿ ಬೇರೆ ಯೇನೂ ಹೆಚ್ಚಿಲ್ಲ. ಹಿಂದೆ ಹೇಳಿದ ಇರ್‌ಧಾತ್ವರ್ಥವೇ ಅದು. ಆದರೆ ಅದರಲ್ಲಿ 'ಸತೋಭಾವಃ ಸತ್ತ್ವಂ, ಸತ್ತಾ" ಎಂಬ ವ್ಯುತ್ಪತ್ತಿಯಿಂದ ಸದಾ ಸರ್ವತ್ರ ಏಕರೂಪವಾಗಿ ಸತ್ಯಭೂತವಾದುದೆಂಬ ಅಸಂಕುಚಿತವಾದ ಮುಖ್ಯಾರ್ಥವನ್ನು ಗ್ರಹಿಸಬೇಕು. ಪ್ರಕೃತಿಯ ಸತ್ತೆಯಲ್ಲಿ ಅದು ಸರ್ವಥಾ ಸಂಕುಚಿತವು. (ಹ್ರಸ್ವವು) ಎಂದು ತಿಳಿಯಿರಿ.

ಅ-ಸರಿ. ಆ ಯಿರುವಿಕೆ ಎಂಬುದಕ್ಕೆ ಒಂದು ಕ್ರಿಯೆ ಎಂದು ನೆಪಕ್ಕೆ, ಹೆಸರಿಟ್ಟರೂ ಅದು ಕರ್ಮ ಹೇಗಾಗುವುದು? ಇರ್ ಎಂಬ ಧಾತುವೇ ಅಕರ್ಮಕವಲ್ಲವೆ?

ಉ-ನಿನ್ನ ಪ್ರಶ್ನೆಯುಕ್ತವೇಸರಿ. ಆದರೆ ನಿನಗೆ ಸಕರ್ಮಕ ಅಕರ್ಮಕ ಎಂಬುದರ ಅರ್ಥವು ತಿಳಿದಿದೆಯೋ?

ಅ—ನೋಡು ಮಾಡು ಮೊದಲಾದ ಧಾತುಗಳು ಏನನ್ನು ಎಂದು ಕರ್ಮ ಪದವನ್ನು ಕೋರುವುದರಿಂದ ಸಕರ್ಮಕವೆಂದು, ಏಳು, ಬೀಳು, ಮುಂತಾದ ಧಾತುಗಳು ಆ ಕರ್ಮಪದವನ್ನು ಕೋರದುದರಿಂದ ಅಕರ್ಮಕವೆಂದು; ಇಷ್ಟು ಮಟ್ಟಿಗೆ ತಿಳಿದಿದೆ.

ಉ—ಅದು ಸರ್ವಸಾಧಾರಣವು ವಿಶೇಷವೇನೆಂದರೆ:—ಸೂಕ್ಷ್ಮವಿಚಾರದಲ್ಲಿ ಸರ್ವಧಾತುಗಳೂ (ಕ್ರಿಯೆಗಳು) ಸಕರ್ಮಕಗಳೇ ಆಗಿರುವುವು. ಹೇಗೆಂದರೆ ಕ್ರಿಯೆ ಯೆಂಬುದು ವ್ಯಾಪಾರವು= ಚೇಷ್ಟೆಯು. ಆಚೇಷ್ಟೆಯು, ಕರ್ತೃ ಕರಣಗಳಿಲ್ಲದೆ ಉಂಟಾಗದು. ಆ ಕ್ರಿಯೆ ನಡೆದಕಡೆ ಆ ಕ್ರಿಯೆಯಿಂದೇ ಪಟ್ಟ ಅದರ ಫಲವೇ ಕರ್ಮವೆನಿಸುವುದು. ಕರ್ತೃ = ಕೆಲಸಮಾಡುವನು, ಕರಣ = ಕ್ರಿಯೆಯನ್ನು ನಡೆಯಿಸಲು ಸಾಧನ, ಉಪಕರಣ—ಕೈಕಾಲು ಮುಂತಾದುದು. ಆ ಕರ್ತೃವ್ಯಾಪಾರ ಕರಣವ್ಯಾಪಾರಗಳೆರಡೂ ಹೇಗೆ ಆ ಕ್ರಿಯೆಯಲ್ಲಿ ಅಡಗಿವೆಯೋ ಆ ಕ್ರಿಯಾ ಪ್ರಯೋಜನವು ಹಾಗೆಯೇ ಆ ಕರ್ಮದಲ್ಲಿ ಅಡಗಿದೆ. ಆ ಕರ್ಮವೇ ಫಲವು, ಕ್ರಿಯೆಯೇ ವ್ಯಾಪಾರ, ಚೇಷ್ಟೆ. ಈ ಫಲವ್ಯಾಪಾರಗಳೆರಡೂ ಬೇರೆಬೇರೆ ತೋರಬಂದಲ್ಲಿ ಸಕರ್ಮಕವೆಂದು, ಒಂದೇ ಕಡೆಯಲ್ಲಿ ಅಡಗಿದ್ದರೆ ಅಕರ್ಮಕವೆಂದು ತಿಳಿಯಬೇಕು.

ಉದಾ—ಬಡಗಿಯು ಮನೆಯನ್ನು ಕಟ್ಟಿದನು. ಇದು ಸಕರ್ಮಕವು. ಇಲ್ಲಿ ಮನೆಯೇ ಫಲರೂಪವು, ಕಟ್ಟುವ ವ್ಯಾಪಾರವೇ ಕ್ರಿಯೆ, ಅದು ಎಲ್ಲಿ ಹುಟ್ಟಿತು? ಬಡಗಿಯಲ್ಲಿ. ಅವನೇ ಕರ್ತೃ. ಹೀಗೆ ಕರ್ತೃ ಕ್ರಿಯೆ ಫಲಗಳು ಬೇರೆಬೇರೆ ಕಾಣುವುದೇ ಸಕರ್ಮಕವು. ಅಕರ್ಮಕಧಾತುಗಳಲ್ಲಿ ಮನೆ ಆಯ್ತು, ಮನೆ ಇದೆ, ಎಂಬಲ್ಲಿ ಆಗುವಿಕೆ ಎಂದರೆ ಸ್ವರೂಪವನ್ನು ಹೊಂದುವುದು, ಇರುವಿಕೆ ಯೆಂಬುದು ತನ್ನನ್ನು ತಾನು ಧರಿಸಿರುವುದು. ಹೀಗೆಯೇ ಬದುಕಿದ್ದಾನೆ = ಪ್ರಾಣವನ್ನು ಧರಿಸಿದ್ದಾನೆ, ನಡೆದನು = ಪೂರ್ವದೇಶವನ್ನು ಬಿಟ್ಟು ಪರದೇಶವನ್ನು ಹೊಂದಿದನು. ಮಲಗಿದನು—ಮೈಯನ್ನು ನೆಲದಲ್ಲಿ ಅಡ್ಡವಾಗಿಸಿದನು, ಎದ್ದನು—ಅಡ್ಡವಾಗಿದ್ದ ಒಡಲನ್ನು ಉದ್ದವಾಗಿಸಿದನು. ಬಿದ್ದನು—ಮೈಯನ್ನು ನೆಲದಲ್ಲಿ ಹಾಕಿದನು. ಹೀಗೆ ಕರ್ಮ

ವೆಂಬ ಕ್ರಿಯಾಫಲವು ಕ್ರಿಯೆಯಲ್ಲಿಯೇ ಅಡಗಿರುವುದರಿಂದ ರೂಢಿಯಲ್ಲಿ ಕರ್ಮಾಕಾಂಕ್ಷೆ ಬೇರೆ ತೋರಬಾರದ ಧಾತುಗಳನ್ನು ಅಕರ್ಮಕವೆನ್ನುತ್ತಾರೆ.

ಹೀಗೆಯೇ ಲೋಕವ್ಯವಹಾರವೆಲ್ಲವೂ ಇದೆಯೆಂದು ತಿಳಿಯಿರಿ. ಜನರು ತಮ್ಮ ಮನೋಗತಾರ್ಥವನ್ನು ಸಂಕ್ಷೇಪಿಸಿ ತಿಳಿಸುವುದಕ್ಕಾಗಿ ಒಂದೊಂದೇ ಶಬ್ದವನ್ನು, ಸಣ್ಣಸಣ್ಣ ವಾಕ್ಯವನ್ನೂ, ಪ್ರಯೋಗಿಸುತ್ತ ಕಾರ್ಯನಿರ್ವಾಹ ಮಾಡುವುದುಂಟು. ಉದಾ—ಹುಲ್ಲು ಬಂದಿತು, ಸೌದೆ ಬರಲಿಲ್ಲ. ಬಂಡಿ ಹೋಯ್ತು; ಅರಸು ಯಮನು, ಅವನು ಸಿಂಹ, ಇವನು ಕತ್ತೆ, ಇತ್ಯಾದಿ ಪ್ರಯೋಗಗಳು ರೂಢವಾಗಿವೆಯಷ್ಟೆ. ಇಲ್ಲಿ ಹುಲ್ಲು, ಸೌದೆ, ಜಡವಾದುದರಿಂದ ಬರುವುದು ಹೋಗುವುದೆಂಬ ಆ ಶಬ್ದಾರ್ಥಗಳು ಸರಿಯಾಗಿ ಹೊಂದದಿರುವುದರಿಂದ "ಹುಲ್ಲನ್ನು ಹಣಕ್ಕೆ ಮಾರಲು ಮನುಷ್ಯನು ಹೊತ್ತುಕೊಂಡು ಬಂದಿದ್ದನು." ಎಂಬಷ್ಟು ವಾಕ್ಯಾರ್ಥವನ್ನು ಹೇಳಬೇಕು. ಇದಕ್ಕೆ ಲಕ್ಷಣಾರ್ಥವೆಂದು ಹೆಸರು. ಹಾಗೆಯೇ ಯಮ ಸಿಂಹಾದಿ ಧರ್ಮಗಳನ್ನು ನರನಲ್ಲಿ ಆರೋಪಿಸುವುದು ಲೋಕರೂಢಿಯಾಗಿದೆ.

ಅ—ಆ ಲೋಕರೂಢಿಯನ್ನೇ ಯೆಲ್ಲರೂ ಅನುಸರಿಸಬೇಕಾಗಿರುವುದರಿಂದ ಅದೇ ಮುಖ್ಯವಲ್ಲವೆ?

ಉ—ಮುಖ್ಯವೇ ಸರಿ. ಮುಖ್ಯವಲ್ಲವೆನ್ನುವರಾರು? ಆದರೆ ವಿಚಾರಪರನಾದ ಜಿಜ್ಞಾಸುವಿಗೆ ಆ ಲೋಕರೂಢಿಯ ಮೂಲವನ್ನು ವಿಮರ್ಶಿಸುವುದಕ್ಕೆ ಶಾಸ್ತ್ರಜ್ಞರೂಢಿಯೇ ಮುಖ್ಯತಮವಾಗಿರುವುದಲ್ಲವೆ? ಈಗ ನೀವೀ ಕರ್ಮವಿಚಾರವನ್ನು ಮಾಡತೊಡಗಿರುವಿರಷ್ಟೆ? "ಕರ್ಮಭಿರ್ವ್ಯಾಪೃತಂ ಜಗತ್" (ಈ ಪ್ರಪಂಚದ ಸರ್ವವ್ಯಾಪಾರವು ಕರ್ಮದಲ್ಲಿಯೇ ಅಡಗಿದೆ.) ಎಂಬುದರಿಂದ ಆ ಕರ್ಮಸ್ವರೂಪವನ್ನು ವಿಮರ್ಶಿಸಿ ತಿಳಿಯುವುದು ಅವಶ್ಯವಷ್ಟೆ? ಆ ಕರ್ಮವೆಂಬುದು ಕ್ರಿಯಾತ್ಮಕವಾಗಿದೆ. ಯಾವುದೊಂದು ಅಲ್ಪತಮವಾದ ಕ್ರಿಯೆಯನ್ನು ವಿಮರ್ಶಿಸಹೋದರು ಅದನ್ನು ಅತಿಸ್ಥೂಲವೆಂದು ತಿಳಿಯಬೇಕಾಗಿದೆ. ಅದರಲ್ಲಿ ಅವಾಂತರ ಸೂಕ್ಷ್ಮವ್ಯಾಪಾರಗಳೆಷ್ಟೋ ಇರುವುವು.

ಶ್ಲೋ|| ಗುಣಭೂತೈರವಯವೈಃ ಸಮೂಹಃ ಕ್ರಮಜನ್ಮನಾಮ್ |
ಬುದ್ಧ್ಯಾ ಪ್ರಕಲ್ಪಿತೋ ಭೇದಃ ಕ್ರಿಯೇತಿ ವ್ಯಪದಿಶ್ಯತೇ ||

ವಾ " ಕ್ರಿಯಾ ಹಿನಾಮೇಯ ಮತ್ಯಂತಾ ಪರಿದೃಷ್ಟಾ, ಪೂರ್ವಪರೀಭೂತಾವಯವಾ ನ ಶಕ್ಯತೇ ಪಿಂಡೀಭೂತಾ ನಿದರ್ಶಯಿತುಂ " ಎಂದು ಮಹಾಭಾಷ್ಯದಲ್ಲಿ ಹೇಳಿದಂತೆ—ಇದು ಈ ಕ್ರಿಯೆ ಎಂದು ನಿರ್ಣಯಿಸಲಾಗದಷ್ಟು ಕ್ಷಣನಶ್ವರಗಳಾದ ಅನೇಕ ವ್ಯಾಪಾರಗಳು ಮಿಂಚಿನಂತೆ ಮನಸ್ಸಿಗೆ ಪರಿಸ್ಫುರಿಸುವಾಗ ಇಲ್ಲಿಂದ ಇಲ್ಲಿಯವರೆಗೆ ಈ ಕ್ರಿಯೆ ಎಂದು ಆದ್ಯಂತವಾಗಿ ಒಂದಾಕಾರವಮಾಡಿ ಯೆತ್ತಿ ತೋರಿಸಲು ಅಸಾಧ್ಯವಾಗಿರುವುದರಿಂದ ಆಪರಿಸ್ಫುರಣಗಳ ವ್ಯಾಪಾರ ಸಮುದಾಯಕ್ಕೆ ಕಾಲದಿಂದಲೋ ಸಂಖ್ಯೆಯಿಂದಲೋ ಬುದ್ಧಿಯಲ್ಲಿ ಒಂದು ಅಭೇದವನ್ನು ಕಲ್ಪಿಸಿಕೊಂಡು " ಕ್ರಿಯೆ ಕ್ರಿಯೆ " ಎಂದು ವ್ಯವಹರಿಸಬೇಕಾಗಿದೆ.

ಹೀಗೆ ಇವನ್ನು ಬೋಧಿಸಲು ಕಷ್ಟತರವಾಗಿರುವುದರಿಂದಲೇ ಕೆಲವರು ಲಾಕ್ಷಣಿಕರು ಅನೇಕ ವ್ಯಾಪಾರ (ಭಾಗ) ವ್ಯಕ್ತಿಗಳಲ್ಲಿರುವ ಸಾಮಾನ್ಯವೇ (ಜಾತಿ) ಕ್ರಿಯೆ ಯೆನ್ನುತ್ತಾರೆ. ಮತ್ತೆ ಕೆಲವರು ಕರ್ತೃವಿಗೆ ಅತ್ಯಂತ ಇಷ್ಟವೆನಿಸಿದ ಫಲಕ್ಕೆ (ಕರ್ಮಕ್ಕೆತಕ್ಕ) ಅನುಕೂಲವಾದ ವ್ಯಾಪಾರವೇ ಕ್ರಿಯೆ ಯೆಂದು ಹೇಳುತ್ತಾರೆ. ಆದರಿಂದ ಗಮನಾಗಮನಾದಿ (ಹೋಗುವ ಬರುವ) ಕ್ರಿಯೆಗಳೆಲ್ಲವೂ ಕ್ಷಣಿಕವಾದ ಅವಾಂತರ (ಒಳಗಿನ) ಬಹು ವ್ಯಾಪಾರಗಳುಳ್ಳದರಿಂದ ಸಮಷ್ಟಿಕ್ರಿಯೆ ಯೆನಿಸಿತು. ಅದರಲ್ಲಿ ಪದನ್ಯಾಸಾದಿ (ಹೆಜ್ಜೆಯಿಡುವುದು) ವ್ಯಷ್ಟಿಕ್ರಿಯೆಗಳು ಅನೇಕಗಳು ಇವೆ ಯೆಂದು ಹಿಂದೆ ಹೇಳಿದ ಸಮಷ್ಟಿ ವ್ಯಷ್ಟಿಧರ್ಮದಂತೆಯೇ ಸರ್ವ ಕರ್ಮಗಳನ್ನೂ ಮನನ ಮಾಡುತ್ತಬಂದರೆ ಈ ಕರ್ಮಸ್ವರೂಪವು ವ್ಯಕ್ತವಾಗುವುದು. (ಪು೫೬)

ಅ—ಕರ್ತೃವಿಗೆ ಇಷ್ಟತಮವಾದ ಫಲವನ್ನು ಕರ್ಮವೆಂಬಿರೆ ! ಅನಿಷ್ಟವಾದುದು ಕರ್ಮವಲ್ಲವೆ ?

ಉ—ಅಹುದು. ಲೋಕದಲ್ಲಿ ಪ್ರಾಣಿಗಳ ಪ್ರವೃತ್ತಿಗಳೆಲ್ಲವೂ ಎಲ್ಲಿಯೆಲ್ಲಿಯು ಪ್ರಾಯಿಕವಾಗಿ ಸುಖಾರ್ಥವೇ ಆಗಿರುವುದರಿಂದ ಯಾವನು ಯಾವಕೆಲಸ ಮಾಡತೊಡಗಿದರೂ ಸುಖೋದ್ದೇಶದಿಂದಲೇ ತೊಡಗುವನು. ಫಲಪರ್ಯವಸಾನಮಾತ್ರ ಅವನವನ ಪೂರ್ವಪುಣ್ಯಾನುಗುಣವಾಗುವುದು. ಇದು ಲೋಕಪ್ರಸಿದ್ಧ ವಿಷಯವು.

ಅ—ಕೊರಲಿಗೆ ನೇಣು ಹಾಕಿಕೊಂಡು ಸಾಯುವವನ ಪ್ರವೃತ್ತಿಯು ಸುಖಾರ್ಥವಲ್ಲವಷ್ಟೆ ?

ಉ—ಅದೂ ಸುಖಾರ್ಥವೇ.

ಅ—ಅದು ಹೇಗೆ ?

ಉ—ಒಬ್ಬನು ಬಲವತ್ತರವಾದ ಅಪರಿಹಾರ್ಯವಾದ (ಆಧಿವ್ಯಾಧಿಗ್ರಸ್ತನು) ಬೇನೆಯುಳ್ಳವನು ಆ ಬೇನೆಯನ್ನು ಸಹಿಸುವುದಕ್ಕಿಂತಲೂ ಸಾಯುವುದು ಸುಖವೆಂದೇ ಆತ್ಮಹತ್ಯೆಗೆಯ್ಯುವನು. ಒಬ್ಬನು ತಿಂಡಿಯಲ್ಲಿ ಬೆರತ ವಿಷವನ್ನು ತಿಳಿಯದೆ ಮೌಢ್ಯದಿಂದಾಗಲಿ, ಆ ವಿಷವನ್ನೂ ತಿಂಡಿಯೆಂದು ಭ್ರಮಿಸಿಯಾಗಲಿ, ಹಗೆಯ ಕೈಗೆ ಸಿಕ್ಕಿ ಅವಮಾನಾನುಭವ ಮಾಡುವುದಕ್ಕೆ ಮೊದಲೇ ವಿಷಭಕ್ಷಣೆ ಮಾಡಬೇಕೆಂದಾಗಲಿ, ಆ ಮರಣವನ್ನೇ ಸುಖವೆಂದು ಭಾವಿಸಿ ವಿಷಪ್ರಾಶನಾದಿಗಳಲ್ಲಿ ಪ್ರವರ್ತಿಸುವನು. ಆದರಿಂದ ಇಷ್ಟಪ್ರಾಪ್ತಿ ಹೇಗೆ ಸುಖವೋ ಅನಿಷ್ಟನಿವೃತ್ತಿಯೂ ಹಾಗೆಯೇ ಸುಖಕ್ಕೆ ಸೇರಿದ್ದೆಂದು ಭಾವಿಸಿರಿ.

ಅ—ಸರಿ. ಪ್ರಜ್ಞೆಯುಳ್ಳಪ್ರಾಣಿಗಳ ಪ್ರವೃತ್ತಿಯಲ್ಲಿ ಯೇನೋ ಸುಖೋದ್ದೇಶವುಂಟೆಂದು ಹೇಳಬಹುದು. ಬುದ್ಧಿಯಿಲ್ಲದ ಜಂತುಗಳು, ನೀರು ಗಾಳಿ ಮೊದಲಾದ ಸಕ್ರಿಯ ಪದಾರ್ಥಗಳು ಸಹಜವಾಗಿ ಪ್ರವರ್ತಿಸುವಾಗ ಸುಖೋದ್ದೇಶವನ್ನು ಕಲ್ಪಿಸುವುದು ಹೇಗೆ ?

ಉ—ಅದಕ್ಕಾಗಿಯೇ ವ್ಯಾಕರಣದಲ್ಲಿ ಕರ್ಮವಿಭಕ್ತಿಯನ್ನು ವಿವರಿಸುವಾಗ ಪಾಣಿನಿಮುನಿಯು ಮೊದಲು ಸಾಮಾನ್ಯವಾಗಿ « ಕರ್ತುರೀಪ್ಸಿತತಮಂ ಕರ್ಮ » = ಕರ್ತೃವಿಗೆ ಅತ್ಯಂತ ಇಷ್ಟವಾದ ಫಲವು ಕರ್ಮವೆಂದು ಹೇಳಿ ; « ಹೊಳೆಯು ಊರನ್ನು ಹಾಳುಮಾಡಿತು, ಗಾಳಿ ಮರವನ್ನು ಬೀಳಿಸಿತು ; ಗೌಡನು ಗ್ರಾಮಕ್ಕೆ ಹೋಗುತ್ತ ಒಂದು ಹುಲ್ಲುಕಡ್ಡಿಯನ್ನು ಮುಟ್ಟಿದನು » ಈ ಮೊದಲಾದ ಪ್ರಯೋಗಗಳಲ್ಲಿ 'ಊರು, ಮರ, ಕಡ್ಡಿ, ಎಂಬೀ ಪದಗಳಿಗೆ ಕರ್ಮವಿಭಕ್ತಿಬರಬೇಕೆಂದು « ತಥಾಯುಕ್ತಂಚಾನೀಪ್ಸಿತಂ = ಇಷ್ಟವಲದ ಉಪೇಕ್ಷಾವಿಷಯ ದ್ವೇಷವಿಷಯಗಳು ಕೂಡ ಇಷ್ಟಕ್ರಿಯೆಯಂತೆ ಭಾವಿಸಲ್ಪಟ್ಟು ಕರ್ಮಗಳೆನಿಸುವುವು » ಎಂದು ಹೇಳಿದ್ದಾನೆ.

ಅ—ಸರಿ-ಇರಲಿ. ಅದು ಬೇರೆ ಶಾಸ್ತ್ರವಿಷಯವು. ಪ್ರಕೃತ ನಾವು ಈ ಕರ್ಮಭಾಗವನ್ನು ಮನನಕ್ಕೆ ತರಬೇಕಾದರೆ ಅದರ ಒಳಭಾಗಗಳಾದ ಕರ್ತೃ, ಕರಣ, ಕ್ರಿಯೆ, ಫಲ, ಎಂಬೀನಾಲ್ಕು ಸೇರಿ ಕರ್ಮವೆನಿಸಿದೆಯಷ್ಟೆ? ಕರ್ಮದಲ್ಲಿ ಫಲವೂ ಅಡಗಿರುವಾಗ ಕರ್ಮಫಲ ಎಂದು ಬೇರೆ ಹೇಳುತ್ತಾರಲ್ಲ! ಆ ಫಲವಾವುದು?

ಉ—ಈ ಕರ್ಮವಿಷಯವನ್ನು ಮನನಮಾಡುವ ಕ್ರಮವು ಹಾಗಲ್ಲ. ಕರ್ಮವನ್ನು ಕೆಲಸ, ಕಾರ್ಯ, ಎಂದೂ ಹೇಳುವೆವಲ್ಲವೆ. ಕಾರ್ಯ ಎಂಬುದು ಕಾರಣವಿಲ್ಲದೆ ಉಂಟಾಗದೆಂದೂ ಗೊತ್ತಾಗಿದೆಯಷ್ಟೆ. ಆ ಕಾರಣವೆಂಬುದೇನು! ಕಾರ್ಯೋತ್ಪತ್ತಿ ಕ್ರಮವೆಂತು? ಈ ಕಾರ್ಯಕಾರಣಭಾವಜ್ಞಾನವಾದರೆ ಆ ಸಂಶಯವು ತೊಲಗುವುದು.

ಅ—ಸರಿ. ಆಕಾರ್ಯಕಾರಣ ಭಾವವನ್ನೇ ವಿವರಿಸಬೇಕು.

ಉ—ಪ್ರತಿಕಾರ್ಯಕ್ಕೂ ಕಾರಣಗಳು ಎರಡು. ೧. ಉಪಾದಾನಕಾರಣ = ಪರಿಣಾಮಿಕಾರಣ. ೨. ಅಪಾದಾನಕಾರಣ = ನಿಮಿತ್ತಕಾರಣ; ಎಂದು ಇವೆರಡೂ ಆ ಕಾರ್ಯಕ್ಕೆ ಪೂರ್ವದಲ್ಲಿಯೇ ಇದ್ದೇ ಇರಬೇಕು.

ಅ—ಉಪಾದಾನ ಅಪಾದಾನ ಎಂಬ ಶಬ್ದಾರ್ಥವೇನು?

ಉ—ಉಪ + ಆ + ದಾನ = ಉಪಾದಾನ = ಒಡನೆ ತೆಗೆದುಕೊಳ್ಳುವುದು. ಕಾರ್ಯದೊಳಗೆ ಕೂಡಿಕೊಂಡಿರುವುದು, ಪರಿಣಮಿಸಿರುವುದು. ಅಪ + ಆ + ದಾನ = ಅಪಾದಾನ = ಬಿಟ್ಟುಬಿಡುವುದು, ಓರೆಯಾಗುವುದು, ಆ ಕಾರ್ಯವಾಗುವವರೆಗೆ ಇದ್ದು ಬಳಿಕ ತೊಲಗುವುದು; ಎಂದರೆ ಆ ಕಾರ್ಯದೊಳಗೆ ಸೇರದಿರುವುದು. ಬೇರೇ ತೋರುತ್ತಿರುವುದು.

ಅ—ಅದು ಹೇಗೋ? ಅದನ್ನು ಉದಾಹರಿಸಿ ತೋರಿಸಬೇಕು.

ಉ—ಅಕ್ಕಸಾಲಿಗನು ಚಿನ್ನದ ಕಡಗವನ್ನು ಮಾಡಿದನು. ಇಲ್ಲಿ ಕಡಗವು ಫಲಭೂತವಾದ ಕರ್ಮವು, ಇದಕ್ಕೆ ಚಿನ್ನವು ಕಡಗವಾಗಿ ಪರಿಣಮಿಸಿದುದರಿಂದ ಉಪಾದಾನಕಾರಣವು. ಕರ್ತೃವಾದ ಅಕ್ಕಸಾಲಿಗನು, ಮಾಡಲು ಸಾಧನವಾದ ಕೊಲಿಮೆ, ಸುತ್ತಿಗೆ, ಪಟ್ಟಡಿ ಮುಂತಾದುಪಕರಣಗಳು; ಕಾಸುವ

ದು, ಬಡಿಯುವುದು, ಮುಂತಾದ ಕ್ರಿಯೆಗಳು; ಕಾಲ, ದೇಶ ದೈವಾದೃಷ್ಟಾದಿಗಳು; ಆ ಕಡಗದಲ್ಲಿ ಸೇರದುದರಿಂದ ಅಪಾದಾನ (ನಿಮಿತ್ತ) ಕಾರಣಗಳು. ಹೀಗೆ ಘಟಪಟಾದಿಗಳಲ್ಲಿಯೂ ಮಣ್ಣು, ನೂಲು, ಘಟಪಟಗಳಿಗೆ ಉಪಾದಾನಕಾರಣಗಳು ; ಕುಂಬಾರ ನೇಯ್ಗರರೂ ಚಕ್ರದಂಡಾದ್ಯುಪಕರಣಗಳೂ; ಕಪಾಲಸಂಯೋಗ ತಂತುಸಂಯೋಗಾದ್ಯವಾಂತರ ಕ್ರಿಯೆಗಳೂ; ದೇಶ ಕಾಲ ಅದೃಷ್ಟಾದಿಗಳೂ; ಅಪಾದಾನಕಾರಣಗಳು. ಆ ಘಟಪಟಗಳಲ್ಲಿ ಸಂಬಂಧಿಸದುದರಿಂದ ನಿಮಿತ್ತಕಾರಣಗಳೆಂದು ತಿಳಿಯಿರಿ.

ಅ–ಆ ನಿಮಿತ್ತಕಾರಣಗಳಿಷ್ಟೇ ಎಂದು ಪರಿಗಣಿಸಬಹುದೇ ?

ಉ–ಉಪಾದಾನಕಾರಣವಾದರೆ ಈ ಕಾರ್ಯಕ್ಕೆ ಇದಿಷ್ಟು ಬೇಕು ಎಂದು ಲೆಕ್ಕವಿಡಬಹುದು. ಕಾರ್ಯದೊಳಗೆ ಸೇರದೆ ಕಾರ್ಯಕ್ಕೆ ಸಾಹ್ಯಕಾರಿಗಳಾದುವು ಎಷ್ಟಾದರೂ ಇರಬಹುದು. ಆದರೆ ಅದರಲ್ಲಿ ೯ ಬಗೆ ನಿಮಿತ್ತಗಳಿರಬೇಕೆಂದು ಹೇಳುತ್ತಾರೆ:–೧ ಕರ್ತೃ, ೨ ಕಾಲ, ೩ ದೇಶ, ೪ ಶ್ರದ್ಧೆ, ೫ ದಂಡಾದಿಕಾರ್ಯೋಪಕರಣ (ಸಾಧನಗಳು); ೬ ಕಾರ್ಯಕಾರಣವಿಜ್ಞಾನ, ೭ ಇದು ಹೀಗೆ ಆಗತಕ್ಕುದೆಂಬ ನಿಶ್ಚಯ, ೮ ಅನುಕೂಲದೈವಯೋಗವುಂಟಾಗುವುದು, ೯ ಬಲವಾದ ಪ್ರತಿಕೂಲಾದೃಷ್ಟವಿಲ್ಲದಿರುವುದು.

ಅ—ಇದರಲ್ಲಿ ಕರ್ಮಫಲವೆಂಬುದು ಕಡೆಗೆ ಯಾವುದು ಗೊತ್ತಾಯಿತು ಎಂದು ತಿಳಿಯಬೇಕು ?

ಉ-ಅಕ್ಕಸಾಲಿಗ ಕುಂಬಾರ ನೇಯ್ಗರರು ಮಾಡಿದ ಕ್ರಿಯೆಯಿಂದೇರ್ಪಟ್ಟ ತದುದ್ದಿಷ್ಟಾರ್ಥವಾದ ಕಟಕ ಘಟ ಪಟಗಳೇ ತತ್ತತ್ಕರ್ಮ ಫಲಗಳಾದುವು. ಬಳಿಕ ಅವುಗಳನ್ನು ಮಾರಿದನೆಂದು ಭಾವಿಸಿರಿ–ಆಗ ಆ ಮಾರಾಟದಿಂದ ಲಬ್ಧವಾದ ಧನವೇ ಅದಕ್ಕೆ ಫಲವು. ಆ ಧನದಿಂದ ಅಕ್ಕಿ, ಬೇಳೆ ಮುಂತಾದ ಪದಾರ್ಥವನ್ನು ಕೊಂಡರೆ ಆ ಪದಾರ್ಥಲಾಭವೇ ಫಲವು. ಅದನ್ನು ಬೇಯಿಸಿ ಅಟ್ಟರೆ ಅಡಿಗೆಯೇ ಫಲವು. ಅದನ್ನು ಉಂಡರೆ ತೃಪ್ತಿಯೇ ಫಲವು. ಹೀಗೆ ಪೂರ್ವಪೂರ್ವಕರ್ಮಗಳಿಗೆ ಉತ್ತರೋತ್ತರ ಕರ್ಮಗಳು ಫಲಗಳು.

ಉತ್ತರೋತ್ತರ ಕರ್ಮಗಳಿಗೆ ಪೂರ್ವಪೂರ್ವಕರ್ಮಗಳು ಕಾರಣಗಳು ಆಗುವವು. ಅದರಿಂದ ಪ್ರಪಂಚದಲ್ಲಿ ಸರ್ವ ಪದಾರ್ಥಗಳೂ ಕಾರ್ಯರೂಪಗಳಾಗಿವೆ. ಉದ್ದೇಶಾನುಸಾರ ಮಾಡುವಕಾರ್ಯಕ್ಕೆ ಮೊದಲು ಕಾರಣಾತ್ಮಕವಾಗಿದ್ದುದು ಕಾರ್ಯವಾಗಿ ಪರಿಣಮಿಸಿದ ಮೇಲೆ ಆ ಕಾರಣವ್ಯವಹಾರವು ಹೋಗುತ್ತದೆ. ಉದಾ. ಹತ್ತಿಯಿಂದ ನೂತ ನೂಲು ಬಟ್ಟೆಯಾದಮೇಲೆ ಆ ಬಟ್ಟೆಯನ್ನು ನೂಲು ಎಂದು ಕರೆವುದಿಲ್ಲ. ನೂಲನ್ನು ಹತ್ತಿಯೆಂಬುದಿಲ್ಲ. ಹತ್ತಿಯನ್ನು ಗಿಡ ಎನ್ನುವುದಿಲ್ಲ. ಗಿಡವನ್ನು ಬೀಜ ಎನ್ನುವುದಿಲ್ಲ. ಹೀಗೆ ಅದರದರ ಪರಿಣಾಮಾನುಸಾರವಾಗಿ ಕಾರ್ಯಕಾರಣಭಾವವನ್ನೂ, ಕರ್ಮಫಲಗಳನ್ನೂ, ಊಹಿಸಿಕೊಳ್ಳಬೇಕು. ಅದರಿಂದಲೇ ಯಾವುದು ಇಷ್ಟವು ಉದ್ದಿಷ್ಟವೂ ಆಗಿರುವುದೋ ಅದೇ ಫಲವೆಂದು ಫಲಿತವಾಗುವುದು

ಅ—ಪ್ರಪಂಚವೆಲ್ಲಾ ಕಾರ್ಯರೂಪವೂ ಫಲರೂಪವೂ ಆದಮೇಲೆ ಇದಕ್ಕೆಲ್ಲಕ್ಕೂ ಮೂಲಕಾರಣವೇನು?

ಉ—ನಮ್ಮ ಇಂದ್ರಿಯಗಳಿಗೆ ಗೋಚರವಾಗಿರುವ ಈ ಸಮಸ್ತ ಪ್ರಪಂಚವೂ ಕಾರ್ಯರೂಪವಾಗಿರುವುದರಿಂದಲೇ ಅನಿತ್ಯವು, ಸ್ಥೂಲವು, ಪರಿಣಾಮಿ, ನಶ್ವರವು ಎನಿಸಿದೆ. ಇದಕ್ಕೆ ಕಾರಣವಾದುದೆಲ್ಲವೂ ನಿತ್ಯವು, ಅಣು ಸೂಕ್ಷ್ಮ, ತತ್ತ್ವರೂಪವಾಗಿರುವುದು. ನಾವಿರುವ ಈ ಪೃಥಿವಿಯಲ್ಲಿ ಅವ್ಯಕ್ತವಾಗಿ ಸೂಕ್ಷ್ಮತತ್ತ್ವರೂಪವಾದುದೆಲ್ಲ ಕಾರಣವು, ನಿತ್ಯವು. ವ್ಯಕ್ತವಾದ ಸ್ಥೂಲ ಕಾರ್ಯರೂಪವು ಅತತ್ತ್ವವು, ಅನಿತ್ಯವು, ನಾಶ್ಯವು, ಆಗಿದೆ. ಹೀಗೆಯೇ ಭೂಜಲತೇಜೋವಾಯುಗಗನಗಳಲ್ಲಿಯೂ; ಈ ಪೃಥಿವ್ಯಾದಿ ಪಂಚಭೂತಗಳಿಗೂ ಕಾರಣವಾದ ತನ್ಮಾತ್ರಗಳೆಂಬ ಗಂಧರಸರೂಪಸ್ಪರ್ಶಶಬ್ದಗಳಲ್ಲಿಯೂ; ಕಾರ್ಯರೂಪವಾದುವು ಅನಿತ್ಯಗಳು ಅತತ್ತ್ವಗಳೆಂದು, ಕಾರಣರೂಪದಲ್ಲಿರುವುವು ತತ್ತ್ವಗಳು ನಿತ್ಯಗಳೆಂದು ಭಾವಿಸಿರಿ—ಇದೆಲ್ಲಾ ಸದ್ವೃತ್ತರತ್ನಾವಳಿಯಲ್ಲಿ ಪ್ರಕೃತಿಪುರುಷಧರ್ಮವಿಚಾರದಲ್ಲಿದೆ. ನೋಡಿರಿ.

ಅ—ದ್ರವ್ಯಾದಿಪದಾರ್ಥಗಳಲ್ಲಿ ನಿತ್ಯಾನಿತ್ಯ ಭೇದವಿರುವಂತೆ ಈ ಕರ್ಮಭಾಗದಲ್ಲಿ ನಿತ್ಯಕರ್ಮ ಅನಿತ್ಯಕರ್ಮ ಎಂಬ ವಿಭಾಗವುಂಟೇನು?

ಉ—ಉಂಟು. ಈಶ್ವರಾದಿ ನಿತ್ಯತತ್ತ್ವದ್ರವ್ಯಗತವಾದ ಕರ್ಮವು. ನಿತ್ಯವು. ಅದೇ ಆ ಪರಮಾತ್ಮಗೆ ಶಕ್ತಿ ವೀರ್ಯರೂಪದಿಂದ ಸ್ವರೂಪಭೂತವಾಗಿರುವುದು. ಪ್ರಾಕೃತಶರೀರಾದ್ಯನಿತ್ಯ ವಸ್ತುಗತವಾದ ಕರ್ಮವೆಲ್ಲವು ಅನಿತ್ಯವು.

ಅ—ಸರಿ. ಇನ್ನು ಆಹ್ನಿಕಕರ್ಮ, ನಿತ್ಯಕರ್ಮ ಎನ್ನುತ್ತಾರಲ್ಲ? ಅದು ಆವುದು?

ಉ—ಅದು ಈ ಶರೀರೇಂದ್ರಿಯಗಳಿಗೂ, ಭೂರ್ಭುವಸ್ಸುವರ್ಲೋಕಗಳಿಗೂ ಸಂಬಂಧಿಸಿದ ವೈದಿಕ ಲೌಕಿಕ ಕರ್ಮಗಳೆಲ್ಲವು ಆಗಿದೆ.

ಅ—ಅವು ಎಷ್ಟು ವಿಧಗಳಾಗಿವೆ?

ಉ—ಪ್ರಪಂಚವೆಲ್ಲವೂ ಕರ್ಮದಿಂದಲೇ ಬಾಳುತ್ತಿರುವುದರಿಂದ ಇಷ್ಟೇ ವಿಧಗಳೆಂದು ಆ ಕರ್ಮವನ್ನು ಪರಿಗಣಿಸುವುದು ಅಸಾಧ್ಯವು. ಇದರಮೇಲೆ ಲೌಕಿಕ ಕರ್ಮವೂ ವೈದಿಕ ಕರ್ಮವೂ ಹಾಸುಹೊಕ್ಕಿನಂತೆ ಬೆರೆತಿರುವುದರಿಂದ ಬೇರೆಬೇರೆ ವಿಭಜಿಸುವುದೂ ಅಶಕ್ಯವಾಗಿಕಾಣುತ್ತಿದೆ. ಆದರೆ ಸ್ಥೂಲದೃಷ್ಟಿಯಿಂದ ಎರಡೆರಡಾಗಿ ಕೆಲವು ಕರ್ಮಕಾಂಡಭೇದಗಳು, ಮೂರುಮೂರಾಗಿ ಕೆಲವು ಕರ್ಮಕಲಾಪದ ಪಂಗಡಗಳು ಕಾಣಬರುತ್ತಿವೆ. ಸಾಮಾನ್ಯವಾಗಿ ಈ ಸ್ಥೂಲವಾದ ಕರ್ಮವಿಭಾಗಗಳಿಂದ ಉಳಿದ ವಿಶೇಷ ಸೂಕ್ಷ್ಮಕರ್ಮಗಳ ಭೇದಗಳನ್ನು ಊಹಿಸಿಕೊಳ್ಳಬೇಕು.

ಅ—ಆ ಯೆರಡೆರಡಾಗಿರುವ ಕರ್ಮಕಾಂಡಗಳಾವುವು! ಅವಕ್ಕೆ ಹೆಸರುಂಟೋ?

ಉ—ಉಂಟು. ಅವು ಪ್ರಾಯಿಕವಾಗಿ ವೈದಿಕ ಕರ್ಮಕಾಂಡಕ್ಕೆ ಸೇರಿಯಿವೆ.

೧. ವಿಹಿತಕರ್ಮ—ನಿಷಿದ್ಧಕರ್ಮ.

೨. ಪುಣ್ಯಕರ್ಮ—ಪಾಪಕರ್ಮ (ಸುಕೃತ—ದುಷ್ಕೃತ.)

೩. ಸಾಮಾನ್ಯಕರ್ಮ—ವಿಶೇಷಕರ್ಮ.

೪. ಶಾರೀರಕರ್ಮ—ಮಾನಸಕರ್ಮ.

೫. ಪ್ರವೃತ್ತಕರ್ಮ—ನಿವೃತ್ತಕರ್ಮ.

೬. ನಿತ್ಯಕರ್ಮ—ನೈಮಿತ್ತಿಕಕರ್ಮ.

೭. ಕಾಮ್ಯಕರ್ಮ—ಅಕಾಮ್ಯಕರ್ಮ (ನಿಷ್ಕಾಮ)

೮. ಐಹಿಕಕರ್ಮ—ಆಮುಷ್ಮಿಕಕರ್ಮ (ಪಾರತ್ರಿಕ)

೯. ಪ್ರಾರಬ್ಧಕರ್ಮ—ಅಪ್ರಾರಬ್ಧಕರ್ಮ.

೧೦. ಆದಾನಕರ್ಮ—ವಿಸರ್ಜನಕರ್ಮ (ಆಗ್ನೇಯ—ಸೌಮ್ಯ)

ಹೀಗೆ ಇವೆಲ್ಲವು ಬೇರೆಬೇರೆ ಸ್ಥೂಲಭಾಗಗಳಾಗಿವೆ.

ಆ—ಇನ್ನು ಮೂರುಮೂರಾಗಿರುವ ಕರ್ಮಕಲಾಪದ ಪಂಗಡವೆಂದಿರೆ? ಅದಾವುದು ?

ಉ—ಅದು ಈ ಲೌಕಿಕವಾದ ವ್ಯಾಪಾರಗಳಲ್ಲಿ ವಿಶೇಷವಾಗಿ ಕಾಣಬರುತ್ತಿವೆ. ಅದರಲ್ಲಿ ವೈದಿಕಗಳೂ ಬೆರೆತಿವೆ. ಎಲ್ಲಕ್ಕೂ ವೇದವೇ ಮೂಲವಾದುದರಿಂದ ಅವುದೊಂದು ಅಲ್ಪವಿಷಯವು ನೇರವಾಗಿಯೋ (ಸಾಕ್ಷಾತ್ತಾಗಿ) ಪರಂಪರೆಯಿಂದಲೋ (ಬಳಸಿಕೊಂಡೋ) ವೇದೋಕ್ತವಾಗಿಯೇ ಇರುವುದೆಂದು ತಿಳಿಯಬೇಕು. ಅದೆಂತೆಂದರೆ :—

೧. ಸ್ವತಂತ್ರೇಶ್ವರಕರ್ಮ—ಜೈವಕರ್ಮ—ಪ್ರಾಕೃತಕರ್ಮ.

೨. ಆಧ್ಯಾತ್ಮಿಕಕರ್ಮ—ಆಧಿದೈವಿಕಕರ್ಮ—ಆಧಿಭೌತಿಕಕರ್ಮ.

೩. ದೇವತಾಕರ್ಮ—ಮಾನುಷಕರ್ಮ—ತಿರ್ಯಕ್ಕರ್ಮ.

೪. ನೈಜಕರ್ಮ—ಅನ್ಯಜಕರ್ಮ—ಆಗಂತುಕ (ಅಪೂರ್ವ) ಕರ್ಮ.

೫. ಮಾನಸಕರ್ಮ—ವಾಚಿಕಕರ್ಮ—ಕಾಯಿಕಕರ್ಮ.

೬. ಸಾತ್ವಿಕಕರ್ಮ—ರಾಜಸಕರ್ಮ—ತಾಮಸಕರ್ಮ.

೭. ಇಷ್ಟಕರ್ಮ—ದ್ವಿಷ್ಟ (ಅನಿಷ್ಟ) ಕರ್ಮ—ಉದಾಸೀನಕರ್ಮ.

೮. ಸಂಚಿತಕರ್ಮ—ಪ್ರಾರಬ್ಧಕರ್ಮ—ಆಗಾಮಿಕರ್ಮ.

೯. ಸ್ವಾರ್ಥಕರ್ಮ—ಪರಾರ್ಥಕರ್ಮ-ಮಿಶ್ರಕರ್ಮ.

೧೦. ದೈವ (ಅದೃಷ್ಟ) ಕರ್ಮ—ಸ್ವಕರ್ಮ (ಸಹಜ)—ಹಠಜಕರ್ಮ.

ಹೀಗೆ ಈ ಕರ್ಮಕಲಾಪವು ಅನೇಕವಿಧ ವಿಕಲ್ಪಗಳಿಗೆ ಆಸ್ಪದವಾಗಿದೆ.

ಆ—ಸರಿ. ಈ ವಿಭಾಗಕ್ರಮವನ್ನು ನೋಡಿದರೆ ಹಿಂದೆ ಹೇಳಿದ ಆ ಧರ್ಮವು ಈ ಕರ್ಮವು ಸಾಧಾರಣವಾಗಿ ಒಂದೇ ಬಗೆಯಾಗಿರುವಂತೆ ತೋರುತ್ತದೆ. ಆದುದರಿಂದ ಧರ್ಮ ಕರ್ಮಗಳಿಗೆ ಭೇದವೇನು ?

ಉ–ಹಿಂದೆ ಧರ್ಮವೇ ಜಗದ್ಧಾರಕವೆಂದು ಹೇಳಿದೆವಲ್ಲವೆ ? "ಧರ್ಮೇ ಸರ್ವಂ ಪ್ರತಿಷ್ಠಿತಂ" ಎಂದಿರುವುದರಿಂದ ಆ ಧರ್ಮದಲ್ಲಿಯೇ ಈ ಕರ್ಮವೂ ಅಡಗಿದೆ. ಇದಲ್ಲದೆ ಇನ್ನೂ ದ್ರವ್ಯಗುಣಗಳೂ, ಜಾತಿವ್ಯಕ್ತ್ಯಾದಿಗಳೂ ಸೇರಿ ಇವೆ ಯಲ್ಲವೆ ? ಆದರಿಂದ ಧರ್ಮವು ವ್ಯಾಪಕವು, ಕರ್ಮವು ವ್ಯಾಪ್ಯವು ಎಂದು ತಿಳಿಯಿರಿ.

ಅ–ಅದೇನು ? ಕರ್ಮವನ್ನೇ ವ್ಯಾಪಕವೆನ್ನಕೂಡದೆ ? ಧಾರಣ ವೆಂಬುದೂ ಕ್ರಿಯೆಯಲ್ಲವೆ ?

ಉ–ಅಹುದು. ಸತ್ತಾರೂಪ ಕ್ರಿಯೆಗೆ ವಿಷಯವಲ್ಲದುದು ಒಂದೂ ಇಲ್ಲ. ಆದರೂ ಕ್ರಿಯೆ ಯೆಂಬುದು ಲೋಕದಲ್ಲಿ ಪ್ರಾಯಿಕವಾಗಿ ಚಲನ ಸ್ಫುರಣ ರೂಪವಾಗಿಯೇ ಗ್ರಹಿಸಲ್ಪಡುತ್ತಿದೆ. 'ಚಂಚಲಂ ಹಿ ಮನಃ ಕೃಷ್ಣ' ಮನಸ್ಸಿಗಿಂತಲೂ ಅಧಿಕವಾಗಿ ಚಂಚಲವಾದ್ದುದು ಮತ್ತೊಂದಿಲ್ಲವೆಂದು ವ್ಯವಹಾರವಿದೆಯಷ್ಟೆ. ಆ ಮನಸ್ಸಿಗೂ ಸಮಾಧಿ ಸುಷುಪ್ತಿ ಮೂರ್ಛಾದಿಗಳಲ್ಲಿ (ಸ್ತಂಭವು) ನಿಶ್ಚಲತ್ವವು ಉಂಟು. ಸದಾಗತಿಯಾದ ವಾಯುವಿಗೂ ಅಗ್ನಿಜಲಾದಿಗಳಿಗೂ ನಿಶ್ಚೇಷ್ಟತ್ವರೂಪ ಸ್ತಂಭನವುಂಟು. ಇದಲ್ಲದೆ ಕ್ರಿಯೆ ಇಲ್ಲದೆ ನಿಶ್ಚಲವಾದ (ನಿಷ್ಕ್ರಿಯ) ದ್ರವ್ಯವುಂಟೆಂಬ ವ್ಯವಹಾರವು ಇದೆ; ನಿರ್ಧರ್ಮಿಕವು ನಿರ್ಗುಣವು ಆದ ವಸ್ತುವೊಂದಿದೆ ಯೆಂಬ ವ್ಯವಹಾರವು ಅನುಭವದಲ್ಲಿಲ್ಲವಲ್ಲ ? ಆದುದರಿಂದ ಧರ್ಮವೇ ವ್ಯಾಪಕವು, ಸನಾತನವು, ಸ್ವಾಭಾವಿಕವು; ಕರ್ಮವು ವ್ಯಾಪ್ಯವು, ಕ್ಷಣಿಕವು, ನಿಮಿತ್ತದಿಂದುಂಟಾಗುವುದು, ಕರ್ತೃಕರಣಾದಿ ಸಾಪೇಕ್ಷವು ಆಗಿದೆ.

ಅ–ಸರಿ. ಈಗ ಹೇಳಿದ ಈ ಕರ್ಮಕಲಾಪದ ಭೇದಗಳಿಗೆಲ್ಲಕ್ಕೂ ಸಂಕ್ಷೇಪವಾಗಿ ಒಂದೊಂದು ಉದಾಹರಣವನ್ನು ತೋರಿಸಬೇಕು.

ಉ–ಆಗಲಿ. ನೀವು ಕ್ರಮವಾಗಿ ಒಂದೊಂದನ್ನೇ ಕೇಳುತ್ತ ಬಂದರೆ ನಾನು ಒಂದೊಂದನ್ನೇ ಉದಾಹರಿಸಿ ಹೇಳುವೆನು.

ಅ–ಮೊದಲು ವೈದಿಕ ಕರ್ಮಕಾಂಡದಲ್ಲಿ ೧ ನೆಯ ವಿಹಿತ–ನಿಷಿದ್ಧ ಎಂಬ ಕರ್ಮಗಳಾವುವು ?

ಉ—ವೇದದಲ್ಲಿ "ಯಜೇತ, ಯಾಜಯೇತ್" ಎಂದು ವಿಧಿಸಲ್ಪಟ್ಟಿರುವ ಯಜ್ಞಾದಿಕರ್ಮಗಳು ವಿಹಿತಗಳು. "ನ ಹಿಂಸ್ಯಾತ್ಸರ್ವಭೂತಾನಿ" ಎಂದು ನಿಷೇಧಿಸಲ್ಪಟ್ಟಿರುವ ಹಿಂಸಾಸ್ತೇಯಾಸತ್ಯಾದಿಗಳು ನಿಷಿದ್ಧಗಳು. ಮಾಡಲೇಬೇಕೆಂದು ಹೇಳಿರುವುದೆಲ್ಲವೂ ವಿಧಿ. ಅದೇ ವಿಹಿತಕರ್ಮವು. ಮಾಡಕೂಡದೆಂದು ಹೇಳಿರುವುದೆಲ್ಲವೂ ನಿಷೇಧವು. ಅದೇ ನಿಷಿದ್ಧಕರ್ಮವು. ಇವೆರಡು ಭಾಗವೂ ಸ್ಪಷ್ಟವಾಗಿ ಸದ್ವೃತ್ತರತ್ನಾವಳಿಯ ಆದಿಭಾಗದಲ್ಲಿಯೇ ತೋರಿಸಲ್ಪಟ್ಟಿದೆ. ದೀರ್ಘಾಯುಃಸೂತ್ರವನ್ನು ನೋಡಿರಿ.

ಅ—೨ನೆಯ ಪುಣ್ಯ ಪಾಪಕರ್ಮಗಳಾವುವು ?

ಉ—ಪರರಿಗೆ ಪ್ರಯೋಜನಕಾರಿಯಾದ, ತನಗೂ ಮುಂದಕ್ಕೆ ಸುಖಹೇತುವಾದ, ಶುಭಕರ್ಮವೆಲ್ಲವೂ ಪುಣ್ಯವು. ತನಗಾಗಲಿ ಪರರಿಗಾಗಲಿ ಯಾವವಿಧವಾಗಿಯಾದರೂ ದುಃಖ ವುಂಟಾಗುವಂತಹ ಕೆಟ್ಟಕೆಲಸವೆಲ್ಲವೂ ಪಾಪವು. ಈ ಶುಭಾ ಶುಭ ಕಾರ್ಯಗಳೇ ಸುಕೃತ ದುಷ್ಕೃತಗಳೆನಿಸಿ ಕೊಂಡಿವೆ. ಅನ್ನ ವಸ್ತ್ರಾದಿಗಳನ್ನು ಕೊಟ್ಟು ಹಿತಾಚರಣೆ ಮಾಡುವುದು ಪುಣ್ಯವು, ಕೊಟ್ಟ ಅನ್ನವಸ್ತ್ರಾದಿಗಳನ್ನು ಅಪಹರಿಸಿ ಪ್ರತಿಕೂಲಾಚರಣೆ (ತೊಂದರೆ) ಮಾಡುವುದೇ ಪಾಪವು.

ಅ— ೩ನೆಯ ಸಾಮಾನ್ಯ ವಿಶೇಷ ಕರ್ಮಗಳಾವುವು ?

ಉ—ಸಾಮಾನ್ಯಕರ್ಮ—ಸರ್ವಸಾಧಾರಣವಾಗಿ ನಡೆಯುವ ಯಜ್ಞದಾನ ತಪೋರೂಪ ಕಾರ್ಯಗಳು ; ವಿಶೇಷವೆಂದರೆ ಭೇದವು—ಬ್ರಾಹ್ಮಣಾದಿಯಾದ ಒಂದೊಂದು ವರ್ಣದಲ್ಲಿಯೂ ಬೇರೆಬೇರೆ ಸಂಸ್ಕಾರರೂಪವಾದ ಉಪನಯನ ವಿವಾಹಾದಿ ಕಾರ್ಯಗಳು ವರ್ಣಾಶ್ರಮದ ವಿಶೇಷಕರ್ಮಗಳು.

ಅ—೪ನೆಯ ಶಾರೀರ ಮಾನಸ ಕರ್ಮಗಳಾವುವು ?

ಉ—ನೀರುಮಣ್ಣು ಮುಂತಾದುದರಿಂದ ಕೈಕಾಲು ಬಾಯಿ ಮೂಗು ಮುಂತಾದ ಕರ್ಮೇಂದ್ರಿಯ ಜ್ಞಾನೇಂದ್ರಿಯ ಸ್ಥಾನಗಳನ್ನು ಶುದ್ಧಿಮಾಡುವ ಶೌಚಸ್ನಾನಾಚಮನಾದಿಗಳು, ಮಿತಾನ್ನಪಾನಾದಿಗಳು, ಶಾರೀರಕರ್ಮಗಳು ;

ಅಂತಃಕರಣಾದಿಗಳನ್ನು ಶುದ್ಧಿಮಾಡುವ ಅಧ್ಯಾತ್ಮತತ್ತ್ವದ ಶ್ರವಣಸ್ಮರಣ ಮನನಾದಿಗಳು ಮಾನಸಕರ್ಮಗಳು.

ಅ—೫ನೆಯ ಪ್ರವೃತ್ತ ನಿವೃತ್ತ ಕರ್ಮಗಳಾವುವು ?

ಉ—ಪ್ರವೃತ್ತವೆಂದರೆ ಬೇಕುಬೇಕೆಂಬಾಶೆಯಿಂದ ನಾನು ಹೀಗೆ ಮಾಡುತ್ತೇನೆ ಹೀಗೆ ಇರುತ್ತೇನೆ ಎಂದು ಸಂಕಲ್ಪಿಸಿಕೊಂಡು ಸುಖಾರ್ಥವಾಗಿ ಯಜ್ಞಾದಿ ಕಾರ್ಯಗಳಲ್ಲಿ ಪ್ರವೇಶಿಸುವುದು. ಗೃಹಾರಂಭ ವಿವಾಹಾದಿಗಳು ಪ್ರವೃತ್ತಕರ್ಮಗಳು. ಆಸ್ವರ್ಗಾದಿ ಸುಖವು ಬೇಡ, ತದರ್ಥವಾದಾ ಕರ್ಮಕಲಾಪವು ಬೇಡ, ಎಂದು ಈ ಸಂಸಾರ ನಿವರ್ತನಾರ್ಥವಾಗಿ ಸರ್ವ ವಿಷಯಗಳಲ್ಲಿಯೂ ವಿರಕ್ತನಾಗಿ ಯತಿಚರ್ಯೆಯಿಂದಿರುವುದು ನಿವೃತ್ತಕರ್ಮವು.

ಅ—೬ನೆಯ ನಿತ್ಯ ನೈಮಿತ್ತಿಕ ಕರ್ಮಗಳಾವುವು ?

ಉ—ಪ್ರತಿದಿನವು ಬಿಡದೆ ಮಾಡಬೇಕಾದ ಸ್ನಾನ ಸಂಧ್ಯಾವಂದನಾದಿಗಳು ನಿತ್ಯಕರ್ಮಗಳು. ಪರ್ವಗಳಲ್ಲಿಯೊ, ಗ್ರಹಣಕಾಲ ಪುಣ್ಯಕ್ಷೇತ್ರ ತೀರ್ಥಗಳಲ್ಲಿಯು ಮಾಡಬೇಕಾದ ಸ್ನಾನದಾನ ತರ್ಪಣಾದಿಗಳು ; ಕೃಚ್ಛ್ರ ಚಾಂದ್ರಾಯಣಾದಿ ಪ್ರಾಯಶ್ಚಿತ್ತಗಳು ನೈಮಿತ್ತಿಕ ಕರ್ಮಗಳು.

ಅ—೭ನೆಯ ಕಾಮ್ಯಾ ಕಾಮ್ಯ ಕರ್ಮಗಳಾವುವು ?

ಉ—ಆಯುರಾರೋಗ್ಯಾರ್ಥಿಯಾಗಿಯೋ, ಪುತ್ರಾರ್ಥಿಯಾಗಿಯೋ, ತ್ರಿವರ್ಗದ ಫಲವನ್ನು ಬಯಸಿಕೊಂಡು ಆಯುಷ್ಕಾಮೇಷ್ಟಿ ಮುಂತಾದ ಶಾಂತಿ ಕರ್ಮವನ್ನು ತೊಡಗುವುದು ಕಾಮ್ಯಕರ್ಮವು. ಐಹಿಕ ಆಮುಷ್ಮಿಕ ಫಲಗಳನ್ನೇ ಬಯಸದೆ ಭಗವತ್ಪ್ರೀತ್ಯರ್ಥವಾಗಿಯೇ ಸರ್ವಕರ್ಮವನ್ನೂ ಮಾಡಿ ಆ ಭಗವಂತನಲ್ಲಿಯೇ ಅದರ ಫಲವನ್ನು ಅರ್ಪಿಸುವುದು ಅಕಾಮ್ಯ (ನಿಷ್ಕಾಮ) ಕರ್ಮವೆನಿಸುವುದು.

ಅ—೮ನೆಯ ಐಹಿಕಾಮುಷ್ಮಿಕಗಳು ಎಂಬ ಕರ್ಮಗಳಾವುವು ?

ಉ—ಈ ಭೂಲೋಕದಲ್ಲಿ ದೊರೆಯುವ ಸುಖಗಳನ್ನುದ್ದೇಶಿಸಿಕೊಂಡು ವಿದ್ಯಾರಂಭಾದಿಗಳಲ್ಲಿ ಪ್ರವರ್ತಿಸುವುದು ಐಹಿಕವು. ಸ್ವರ್ಗಾದಿ ಲೋಕಗಳ ಸುಖಾರ್ಥವಾಗಿ ಯಜ್ಞದಾನಾದಿಗಳನ್ನು ಮಾಡುವುದು ಆಮುಷ್ಮಿಕವು.

ಅ—೯ನೆಯ ಪ್ರಾರಬ್ಧಾ ಪ್ರಾರಬ್ಧ ಕರ್ಮಗಳಾವುವು ?

ಉ–ಈ ದೇಹವನ್ನು ಹೊಂದುವುದಕ್ಕಾಗಿ ಹಿಂದಿನ ಹುಟ್ಟಿನಲ್ಲಿ ಮಾಡಿದ್ದ ಕರ್ಮಾನುಸಾರವಾಗಿ ಪ್ರಾಪ್ತವಾಗಿರುವ ಈ ಒಡಲಿನ ಆಹಾರ ನಿದ್ರಾದಿ ಕಾರ್ಯಗಳು; 'ಈಗ ಇಲ್ಲಿ ಇದನ್ನು ಮಾಡುವೆನು' ಎಂದು ಸಂಕಲ್ಪಿಸಿ ಕೊಂಡಂತೆ ದೀಕ್ಷಿತನಾಗಿದ್ದು ಮಾಡಲಾರಂಭಿಸಿದ ಯಜ್ಞದಾನ ತಪಸ್ಸುಗಳು ಪ್ರಾರಬ್ಧಗಳು; ಹೊಟ್ಟೆಯೊಳಗೆ ಆಹಾರವನ್ನು ಕೊಟ್ಟ ಮೇಲೆ ಅದು ಜೀರ್ಣವಾಗಿ ಪರಿಣಮಿಸುವವರೆಗೆ ಒಳಗೆ ನಡೆವ ಕೆಲಸವು ಪ್ರಾರಬ್ಧವು. ಇದುವರೆಗೆ ತಾನು ಮಾಡಬೇಕಾದುದೆಂದು ನಿಶ್ಚಿತವಾಗಿದ್ದು ಅದನ್ನಿನ್ನೂ ಪ್ರಾರಂಭಿಸದೇ ಇರುವುದು ಅಪ್ರಾರಬ್ಧವು. ತಾನು ನಾಳೆ ತಿನ್ನಬೇಕೆಂದು ಕೂಡಿಟ್ಟಿರುವುದು ಕೂಡ ಅಪ್ರಾರಬ್ಧವು. ಇದೇ ಸಂಚಿತವು.

ಅ–೧೧ ನೆಯ ಆದಾನ ವಿಸರ್ಜನ ಕರ್ಮಗಳಾವವು ?

ಉ–ಆದಾನವೆಂದರೆ–ಕೊಟ್ಟುದನ್ನು, ದೊರೆತುದನ್ನು, ತಾನು ತೆಗೆದು ಕೊಳ್ಳುವುದು, ಪರಿಗ್ರಹಿಸುವುದು, ಸ್ವೀಕರಿಸುವುದು. ವಿಸರ್ಜನವೆಂದರೆ ತನ್ನಲ್ಲಿರುವುದನ್ನು ಕೊಟ್ಟುಬಿಡುವುದು, ಹೊರಗೆ ಹಾಕುವುದು, ತಳ್ಳುವುದು, ಬಿಸುಡುವುದು. ಇದು ಸರ್ವಕ್ಕು ಸಂಬಂಧಿಸಿರುವುದರಿಂದ ಮುಖ್ಯಕರ್ಮವಾಗಿರುವುದು. ಇದನ್ನೇ ಆಗ್ನೇಯಕರ್ಮ ಸೌಮ್ಯಕರ್ಮವೆನ್ನುವರು. "ಅಗ್ನೀಷೋಮಾತ್ಮಕಂ ಜಗತ್" ಎಂದು ಪ್ರಪಂಚವೆಲ್ಲವು ಅಗ್ನಿ, ಸೋಮ, ಎಂಬೀ ಯೆರಡು ದೇವತಾಕರ್ಮಗಳಲ್ಲಿಯೇ ಅಡಗಿದೆ. ಆದಾನವು ಆಗ್ನೇಯವು, ಉಷ್ಣವು. ವಿಸರ್ಜನವು ಸೌಮ್ಯವು, ಶೀತವು. ಈ ಶೀತೋಷ್ಣ ವೀರ್ಯಗಳ ಕಾರ್ಯವೇ ಪರ್ಯಾಯವಾಗಿ ಪ್ರಪಂಚದಲ್ಲೆಲ್ಲಾ ಭಾಗಗಳಲ್ಲಿಯೂ, ಈ ದೇಹೇಂದ್ರಿಯಮನಃಪ್ರಾಣಾದಿಗಳಲ್ಲಿಯು, ಸರ್ವದಾ ನಡೆಯುತ್ತಲೇ ಇರುವುದೆಂದು ಭಾವಿಸಬೇಕು.

ಅ–ಇದೇನೋ ಚೆನ್ನಾಗಿ ತಿಳಿಯಲಿಲ್ಲವಲ್ಲ ? ಕೊಂಚ ಉದಾಹರಿಸಿ ಹೇಳಬೇಕು.

ಉ–ಅಗ್ನಿ ಸೂರ್ಯರಿಂದ ಸೌಮ್ಯಾಂಶವು (ದ್ರವ ರಸಭಾಗವು) ಹೀರಲ್ಪಟ್ಟು ಸೂಕ್ಷ್ಮತ್ವಾದ ಊಷ್ಮರೂಪವಾಗಿ ಮೇಲಕ್ಕೆ ತೆಗೆದುಕೊಳ್ಳಲ್ಪಡುವುದು

ಆದಾನವು. ಹೀಗೆ ಮೇಲಕ್ಕೆ ಹೋದ ಸೌಮ್ಯಾಂಶವು ಮರಳಿ ಮಳೆ, ಮಂಜು, ಆಗಿ ಕೆಳಗೆ ಬಿಡಲ್ಪಡುವುದು ವಿಸರ್ಜನವು. ಇವೆರಡು ಕೆಲಸಗಳು ಹಗಲು ಇರುಳು ಯಾವಾಗಲು ಎಲ್ಲೆಲ್ಲಿಯು ನಡೆಯುತ್ತಲೇ ಇರುವುದು. ಅದರಲ್ಲಿ ಸಾಮಾನ್ಯವಾಗಿ ಆರುತಿಂಗಳು ಆಗ್ನೇಯವಾದ ಆದಾನಕರ್ಮ ನಡೆವುವೇ ಉತ್ತರಾಯಣವೆಂದು, ಮತ್ತೆ ಆರುತಿಂಗಳು ಸೌಮ್ಯಕರ್ಮವಾದ ವಿಸರ್ಜನವು ನಡೆವುದೇ ದಕ್ಷಿಣಾಯನವೆಂದು ಪ್ರಸಿದ್ಧವಾಗಿಯೇ ಇದೆಯಲ್ಲವೇ ? ಹೀಗೆ ಸ್ವಾಭಾವಿಕವಾಗಿ ಲೋಕದಲ್ಲಿ ಸಾಮಾನ್ಯವಾಗಿ ನಡೆಯುವ ಈ ಶೀತೋಷ್ಣಪರಿವರ್ತನ ವ್ಯಾಪಾರದಲ್ಲಿ ಮತ್ತೊಂದು ಜ್ಞೇಯವಿಶೇಷವುಂಟು.

ಅ–ಅದೇನು ? ಶರೀರ ಸಂಬಂಧವೋ ?

ಉ–ಅಹುದು. ಈ ಶರೀರ ಸ್ವಭಾವವು ಬಾಹ್ಯವಾದ ಶೀತೋಷ್ಣಗಳನ್ನು ಒಳಗೆ ತೆಗೆದುಕೊಳ್ಳದೆ ತನ್ನ ಶಕ್ತಿ ಇರುವಷ್ಟು ಮೊದಲು ತಡೆಯುವುದಕ್ಕೋಸ್ಕರ ಉಷ್ಣ ಶೀತ ಪರಿವರ್ತನವನ್ನು ನಡೆಯಿಸುತ್ತಿರುವುದು. ಈ ಶರೀರದ ಸ್ವಾಸ್ಥ್ಯಕ್ಕೆ (ಆರೋಗ್ಯಕ್ಕೆ) ಶೀತೋಷ್ಣ ಸಾಮ್ಯವೇ ಅವಶ್ಯಕವಾಗಿರುವುದರಿಂದ ಸಹಜವಾಗಿ ಹೊರಗಣ ಉಷ್ಣವನ್ನು ತಡೆಯುವುದಕ್ಕೆ ಒಳಗೆ ಶೀತವು ; ಹೊರಗಣ ಶೀತವನ್ನು ತಡೆಯುವುದಕ್ಕೆ ಒಳಗೆ ಉಷ್ಣವು ; ಹೀಗೆ ಪರಿವರ್ತಿಸುತ್ತಿರುವುದು ದೇಹಪ್ರಕೃತಿಯ ಲಕ್ಷಣವು. ಇದಕ್ಕೆ ಸಾಹ್ಯವನ್ನು ಮಾಡುವುದೇ ನಮ್ಮ ನಿತ್ಯಾಹ್ನಿಕ ನಿತ್ಯಕರ್ಮ ನಿತ್ಯಧರ್ಮಗಳು ಎಂಬುದನ್ನು ಮರೆಯಕೂಡದು.

ಅ–ಇನ್ನು ಮೂರು ಮೂರಾಗಿ ವಿಂಗಡಿಸಿರುವ ಕರ್ಮಕಲಾಪದಲ್ಲಿ ಮೊದಲನೆಯದಾದ ಈಶ್ವರ ಜೈವ ಪ್ರಾಕೃತ ಕರ್ಮಗಳಾವುವು ?

ಉ–ಈಶ್ವರನೇ ಸರ್ವಸ್ವತಂತ್ರನಾದುದರಿಂದ ಸರ್ವ ಪ್ರಪಂಚವನ್ನು ಸೃಷ್ಟಿಸಿ ಅದರಲ್ಲಿ ತಾನೇ ಅವ್ಯಕ್ತ ಸೂಕ್ಷ್ಮ ರೂಪಗಳಿಂದ ಅನುಪ್ರವೇಶ ಮಾಡಿ ಸರ್ವಕ್ಕು ಸತ್ತಾಪ್ರದನಾಗಿರುವುದರಿಂದ ಸರ್ವಕರ್ಮಗಳು, ಸರ್ವಧರ್ಮಗಳು, ಸರ್ವಜಗತ್ಸೃಷ್ಟಿಸ್ಥಿತಿ ಲಯ ವ್ಯಾಪಾರಗಳು, ಸರ್ವಚೇಷ್ಟೆಗಳು, ಮುಖ್ಯವಾಗಿ ಆತನ ಅಧೀನಗಳು. "ತೇನ ವಿನಾ ತೃಣಮಪಿ ನ ಚಲತಿ" ಎಂಬ ಗಾಥೆಯೇ ಪ್ರಸಿದ್ಧವಾಗಿದೆಯಷ್ಟೆ ? ಇನ್ನು ಮಹಾರಾಜನ ಅಧಿ

ಕಾರವು ಮಂತ್ರಿ ಮೊದಲಾದವರಲ್ಲಿಯೂ ಕೊಂಚ ಕೊಂಚ ವ್ಯಾಪಿಸಿರುವಂತೆ ಚಿದಚಿತ್ಪ್ರಕೃತಿಗಳಲ್ಲಿ ನಡೆಯುವ ಚೇಷ್ಟಾದಿಗಳು ಈಶ್ವರೇಚ್ಛಾನುಸಾರಿಗಳಾಗಿಯೇ ಇವೆಯೆಂದು ತಿಳಿಯಬೇಕು.

೧. ಅದರಿಂದ ಸ್ವತಂತ್ರೇಶ್ವರ ಕರ್ತೃಕ ಕರ್ಮವು—ಜಗತ್ಸೃಷ್ಟಿ ಮೊದಲಾದ ಅದೊಂದು ಲೀಲಾರೂಪವು.

೨. ಬ್ರಹ್ಮಾದಿ ಜೀವರ ಕರ್ಮವು—ಈಶ್ವರಾಜ್ಞಾನುವರ್ತನವು, ತದ್ಗತ ಫಲಾನುಭವವು.

೩. ತದಧೀನವಾದ ಜಡಪ್ರಕೃತಿಯಕರ್ಮವು—ವ್ಯಕ್ತಾವ್ಯಕ್ತಸ್ಥೂಲಸೂಕ್ಷ್ಮಭಾವಗಳಿಂದ ಸದಾ ಪರಿಣಮಿಸುತ್ತಿರುವುದು ಸರ್ವಸಾಧಾರಣವಾಗಿದೆ ಅದರಿಂದ ಇದೇ ಸ್ವಾಭಾವಿಕವೆನಿಸಿರುವ ಕರ್ಮವು.

ಅ—೨ ನೆಯ ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕವೆಂಬ ಕರ್ಮಗಳು ಆವುವು ?

ಉ—೧ ತನ್ನೊಳಗೆ ನಡೆಯುವ ಆತ್ಮಮನಸ್ಸಂಯೋಗವೇ ಮೊದಲಾದ ಒಳಗಣ ಸೂಕ್ಷ್ಮವ್ಯಾಪಾರಗಳು ಅಧ್ಯಾತ್ಮಿಕಗಳು.

೨. ಸೂರ್ಯಾಗ್ನಿ ವಾಯುವರುಣೇಂದ್ರಾದಿ ದೇವತೆಗಳ ಬಿಸಿಲು ಗಾಳಿ ಮಳೆ ಮುಂತಾದ ಕಾರ್ಯಗಳು ಆಧಿದೈವಿಕಗಳು.

೩. ಮನುಷ್ಯ ಪಶು ಪಕ್ಷಿ ಸರೀಸೃಪಾದಿಪ್ರಾಣಿಗಳ ಆಹಾರ ವಿಹಾರ ನಿದ್ರಾದಿ ವ್ಯಾಪಾರಗಳು ಆಧಿಭೌತಿಕಗಳು.

ಅ—೩ ನೆಯ ದೇವ ಮಾನುಷ ತಿರ್ಯಕ್ಕರ್ಮಗಳಾವುವು ?

ಉ—೧. ದೇವಕರ್ಮವು—ಯಜ್ಞದಲ್ಲಿ ಹವಿರ್ಭಾಗಹರಣಾದಿಗಳು. ಲೋಕಪಾಲನಾದಿಕಾರ್ಯಗಳನ್ನು ನಿರ್ವಹಿಸುವಿಕೆ.

೨. ಮಾನುಷಕರ್ಮವು—ಯಥಾಯೋಗ್ಯವಾಗಿ ಲೌಕಿಕವೈದಿಕಗಳಾದ ಯಜ್ಞದಾನತಪಸ್ಸುಗಳು. ದೇವತ್ವವನ್ನು ಪಡೆಯಲು ಯತ್ನಿಸುವುದು.

೩. ತಿರ್ಯಕ್ಕರ್ಮಗಳು " ಯಜ್ಞಾರ್ಥಂ ಪಶವಃ ಸೃಷ್ಟಾಃ " ಎಂದು ಪರೋಪಕಾರಾರ್ಥವಾಗಿ ತಮ್ಮ ಶರೀರಪ್ರಾಣಗಳನ್ನು ಒಪ್ಪಿಸುವುದು, ಮುಂದಕ್ಕೆ ಮನುಷ್ಯಾದಿಜನ್ಮಗಳನ್ನು ಪಡೆಯುವುದು.

ಅ—೪ ನೆಯ ನೈಜಾನ್ಯಜಾಗಂತುಕ ಕರ್ಮಗಳಾವುವು ?

ಉ— ೧. ನೈಜ (ತನ್ನದು) ಕುದುರೆಗೆ ನಡೆವುದು ಓಡುವುದು ನೈಜವು.

೨. ಬಂಡಿಗೆ ಚಲನವು ಕುದುರೆಯಿಂದ ಬಂದುದರಿಂದ ಅನ್ಯಜವು.

೩. ಆ ಬಂಡಿಯಲ್ಲಿ ಕುಳಿತವನ ಕೈಯಲ್ಲಿದ್ದ ಪತಾಕಾದಿಗಳು ಗಾಳಿ ಮಳೆ ಮುಂತಾದುದರಿಂದ ಕೆಳಗೆ ಬೀಳುವುದು, ಅಲ್ಲಾಡುವುದು, ಆಗಂತುಕವು. ಅಗ್ನಿಗೆ ಊರ್ಧ್ವಜ್ವಲನವು ನೈಜವು, ಜಲಕ್ಕೆ ಉಷ್ಣಭಾವವು ಆ ಅಗ್ನಿಯಿಂದುಂಟಾದುದರಿಂದ ಅನ್ಯಜವು. ಆ ಪುಷ್ಪಕ್ಕೆ ನಳಿಕಾದಿಗಳಿಂದ ತಿರ್ಯಗ್ಗಮನ ವುಂಟಾಗುವುದು ಆಗಂತುಕವು. ಇದು ಊಷ್ಮಕ್ಕೆ ಪೂರ್ವದಲ್ಲಿ ಇಲ್ಲದುದರಿಂದ ಅಪೂರ್ವವು ಎನಿಸಿಕೊಂಡಿತು.

ಅ—೫ ನೆಯ ಮನೋವಾಕ್ಕಾಯಕರ್ಮಗಳಾವುವು ?

ಉ—೧. ಮನಃಕರ್ಮವು—ಸ್ಮರಿಸುವುದು, ಆಲೋಚಿಸುವುದು, ಸಂದೇಹಿಸುವುದು, ನಿಶ್ಚಯಿಸುವುದು, ಅಹಂಕರಿಸುವುದು, ಬಯಸುವುದು, ಮುಂತಾದ ಸುಖದುಃಖದ ಕಾರ್ಯಗಳೆಲ್ಲವು ಮಾನಸಿಕವೆನಿಸಿದೆ.

೨. ವಾಚಿಕಕರ್ಮವು—ನುಡಿವುದು, ಮಾತನಾಡುವುದು, ಕೂಗುವುದು, ನಗುವುದು, ಅಳುವುದು, ಅಕ್ಷರೋಚ್ಚಾರಣೆ ಮುಂತಾದುದು. ಇನ್ನು ಸತ್ಯ ಪ್ರಿಯವಚನಗಳು, ಸ್ತುತಿ, ಅಧ್ಯಯನಾದಿಗಳು ; ಅಸತ್ಯ, ಅಪ್ರಿಯ, ನಿಂದಾವಚನಗಳು, ಅಸಂಗತಪ್ರಲಾಪಾದಿಗಳು; ಮೊದಲಾದ ಶುಭಾಶುಭ ವಾಗ್ವ್ಯಾಪಾರಗಳೆಲ್ಲವು ಇದಕ್ಕೇ ಸೇರಿ ಯಿವೆ.

೩. ಕೊಡುವುದು, ಕೊಂಬುದು, ನಡೆವುದು, ಆಡುವುದು, ಆಹಾರವಿಹಾರಾದಿಗಳು ಮೊದಲಾದ ಚೇಷ್ಟೆಗಳೆಲ್ಲವು ಕಾಯಿಕಕರ್ಮಗಳು.

ಅ—೬ ನೆಯ ಸಾತ್ವಿಕ ರಾಜಸ ತಾಮಸ ಕರ್ಮಗಳಾವುವು ?

ಉ—೧. ರಾಗದ್ವೇಷದಂಭಮಾನಾದಿಗಳಿಲ್ಲದೆ ಫಲಾಭಿಲಾಷೆಯನ್ನು, ಸಂಗವನ್ನು, ಬಿಟ್ಟು ಸಮಾಹಿತನಾಗಿ ನಡೆಯಿಸುವ ಕೆಲಸವೆಲ್ಲವು ಸಾತ್ವಿಕವು.

೨. ಅಹಂಕಾರದಿಂದ, ಫಲಾಭಿಸಂಧಿಯಿಂದ, ಬಹು ಪ್ರಯಾಸದೊಡನೆ ನಡೆಯಿಸುವುದೆಲ್ಲವು ರಾಜಸವು.

೩. ಅಜ್ಞಾನಾನ್ಯಥಾಜ್ಞಾನಮೋಹಾದಿಗಳಿಂದ ಪರರಿಗಾಗಲಿ ತನಗಾಗಲಿ ನಾಶವು ದುಃಖವು ಸಂಭವಿಸುವುದನ್ನುಕೂಡ ಲಕ್ಷಿಸದೆ ತೊಡಗುವ ಸಾಹಸದ ಕೆಲಸವೆಲ್ಲವು ತಾಮಸವು.

ಶ್ಲೋ || ಶತ್ತಸ್ಸಾತ್ವಿಕಮೇವೈಷಾಂ ಯದ್ವೃದ್ಧಾಃ ಪ್ರಚಕ್ಷತೇ |
ನಿಂದಂತಿ ತಾಮಸಂ ತತ್ತದ್ರಾಜಸಂ ತದುಪೇಕ್ಷಿತಂ || ಭಾಗ ೧೧–೧೩–೬||

ಈ ಲೋಕಕಾರ್ಯಗಳಲ್ಲಿ ವೃದ್ಧರು ಆವಾವುದನ್ನು ಶ್ಲಾಘಿಸುತ್ತ ಕೊಂಡಾಡುವರೋ ಅದದೆಲ್ಲವು ಸಾತ್ವಿಕವು; ಆವಾವುದನ್ನು ಕೂಡದೆಂದು ದೂಷಿಸುವರೋ ಅದನೆಲ್ಲವು ತಾಮಸವು; ಆವುದನ್ನು ಮನಕ್ಕೆ ತಾರದೆ ಉಪೇಕ್ಷಿಸುವರೋ ಅದು ರಾಜಸವು.

ಅ–೭ ನೆಯ ಇಷ್ಟಾನಿಷ್ಟೋದಾಸೀನಕರ್ಮಗಳಾವುವು ?

ಉ–ತಾನು ಬಯಸಿ ಮಾಡುವುದೆಲ್ಲವು ಇಷ್ಟವು, ತನಗೆ ಬೇಡದಿದ್ದರೂ ಪರರ ಬಲಾತ್ಕಾರದಿಂದ ಅವಶನಾಗಿ ಮಾಡುವುದು ಅನಿಷ್ಟವು, “ಗ್ರಾಮಂ ಗಚ್ಛನ್ ತೃಣಂ ಸ್ಪೃಶತಿ” ಎಂಬಂತೆ ಹೋಗುತ್ತಹೋಗುತ್ತ ಸುಮ್ಮನೆ ಒಂದು ಹುಲ್ಲುಕಡ್ಡಿಯನ್ನು ತಾಕುವಂತಹ ಉಪೇಕ್ಷಾವಿಷಯವಾದ ಕಾರ್ಯವೆಲ್ಲವು ಉದಾಸೀನವಾದ ಕರ್ಮವು.

ಅ–೮ ನೆಯ ಸಂಚಿತಪ್ರಾರಬ್ಧಾಗಾಮಿಕರ್ಮಗಳಾವುವು ?

ಉ–೧. ತಾನೇ ಮಾಡಿ ನಿರ್ವಹಿಸತಕ್ಕವುಗಳೆಂದು, ಅನುಭವಿಸತಕ್ಕವೆಂದು, ಇದುವರೆಗೆ ಏರ್ಪಟ್ಟಿರುವುದೆಲ್ಲವು ಸಂಚಿತವು.

೨. ಆ ಸಂಚಿತದಲ್ಲಿ ೧–೨ನ್ನು ಮಾಡಲು ತೆಗೆದುಕೊಂಡು ಮಾಡುತ್ತ, ಅನುಭವಿಸುತ್ತ, ಇರುವುದೆಲ್ಲವು ಪ್ರಾರಬ್ಧವು.

೩. ಮುಂದಕ್ಕೆ ತನಗೆ ಬರುವುದೆಲ್ಲವು, ಕರ್ತವ್ಯವೆನಿಸಿಕೊಂಡು ಬರಬಹುದಾದುದುಕೂಡ ಆಗಾಮಿ, ಭಾವಿ, ಭವಿಷ್ಯತ್ತು, ಎನಿಸಿಕೊಂಡಿರುವುದು.

ಅ–೯ ನೆಯ ದೈವಜ, ಯತ್ನಜ, ಹಠಜ, ಎಂಬ ಕರ್ಮಗಳಾವುವು?

ಉ–“ದೈವಮಾತ್ಮಕೃತಂ ವಿದ್ಯಾತ್ಕರ್ಮಯತ್ಪೌರ್ವದೈಹಿಕಂ” ಎಂದು ತಾನು ಪೂರ್ವಜನ್ಮದಲ್ಲಿ ಮಾಡಿದ್ದ ಶುಭಾಶುಭಕರ್ಮವೇ ದೈವವೆನಿಸಿಕೊಂಡಿದೆ. ಅದರ ಬಲದಿಂದ ನಡೆಯುವ ಕೆಲಸವು ದೈವಜಕರ್ಮವು. ೧.

ಈಗ ಈ ದೇಹವಲ್ಲಿ ನಡೆಯುಸುತ್ತಿರುವ ಪುರುಷಕಾರವು, ತನ್ನ ಉದ್ಯೋಗವು, ಸ್ವಯತ್ನಜಕರ್ಮವು. ೨.

ಇವೆರಡನ್ನು ಮೀರಿ ಆಧಿದೈವಿಕಾಧಿಭೌತಿಕಕರ್ಮ ಪ್ರವಾಹಗಳಿಂದ ಪ್ರಾಪ್ತವಾಗುವುದು. ಹಠಜಕರ್ಮವು. ೩.

ಲೋಕದಲ್ಲಿ ಈ ತ್ರಿವಿಧಕರ್ಮಗಳು ಮಾನವರ ದಿನಚರ್ಯೆಗಳಲ್ಲಿ ಬೆರೆತು ಕೊಂಡೇ ಕಾಣಬರುತ್ತವೆ. ಅದೆಂತೆಂದರೆ:—

ಶ್ಲೋ || " ಕಿಂಚಿದ್ದೈವಾ ದ್ಧಠಾತ್ಕಿಂಚಿ ತ್ಕಿಂಚಿದೇವ ಸ್ವಕರ್ಮಭಿಃ |
ಪ್ರಾಪ್ನುವಂತಿ ನರಾ ರಾಜನ್ ಮಾತೇಸ್ತ್ವನ್ಯಾ ವಿಚಾರಣಾ "

(ಲೋಕದಲ್ಲಿ ಮನುಷ್ಯರು ಕೆಲವು ಸುಖದುಃಖಗಳನ್ನು ಪೂರ್ವಕರ್ಮದಿಂದಲು, ಕೆಲವನ್ನು ಈಗಿನ ತಮ್ಮ ಯತ್ನಗಳಿಂದಲು, ಮತ್ತೆ ಕೆಲವನ್ನು ಆಕಸ್ಮಿಕವಾಗಿ ಅಪ್ರಯತ್ನದಿಂದಲು, ಹೊಂದುತ್ತಾರೆ. ಈ ವಿಷಯದಲ್ಲಿ ಬೇರೆ ಸಂಶಯ ಕೆಲಸವಿಲ್ಲ.) ಭಾರತವನ ಪರ್ವ ೧೮೩ ಅ.

ಯಾಜ್ಞವಲ್ಕ್ಯಸ್ಮೃತಿಯಲ್ಲಿ ಹೀಗೆ ಹೇಳಿದೆ:—

ಶ್ಲೋ || " ಯಥಾಹ್ಯೇಕೇನ ಚಕ್ರೇಣ ನ ರಥಸ್ಯ ಗತಿರ್ಭವೇತ್ |
ತಥಾ ಪುರುಷಕಾರೇಣ ವಿನಾ ದೈವಂ ನ ಸಿಧ್ಯತಿ || ೧—೧ ೫೧ ||

(ರಥವು (ಬಂಡಿ) ಒಂದೇ ಚಕ್ರದಿಂದ ಹೇಗೆ ನಡೆಯಲಾರದೋ ಹಾಗೆ ಪುರುಷಪ್ರಯತ್ನವಿಲ್ಲದೆ ದೈವವು ಸಿದ್ಧಿಸದು) ಆದರೆ ಇವೆರಡರಲ್ಲಿ ಪ್ರಬಲ ದುರ್ಬಲಭಾವವನ್ನು ಸದ್ವೃತ್ತಾನುಷ್ಠಾನದಲ್ಲಿ ಪುಟ ೨೦ ಲ್ಲಿ ಹೇಳಿರುವಂತೆ ವಿಚಾರಿಸಿಕೊಳ್ಳಬೇಕು.

ಅ—೧೧೪ ನೆಯ ಸ್ವಾರ್ಥ ಪರಾರ್ಥ ಮಿಶ್ರಕರ್ಮಗಳಾವುವು ?

ಉ—ತಾನು ತನ್ನದು ಎಂಬ ಅಭಿಮಾನದೊಡನೆ ಮಾಡಿಕೊಳ್ಳುತ್ತಿರುವ ದೇಹಗೇಹಾದಿಗಳ ಕಾರ್ಯವೆಲ್ಲವು ಸ್ವಾರ್ಥವು. ೧.

ಈ ದೇಹಗೇಹಾತಿರಿಕ್ತವಾದ, ನಾಡಿಗರ ಕ್ಷೇಮಾರ್ಥವಾದ ಕೆಲಸವೆಲ್ಲವು ಪರಾರ್ಥವು. ೨.

ಇವೆರಡು ಬೆರೆತಿರುವುದು ಮಿಶ್ರವು. ಎಂದರೆ ತನಗೂ ಇತರರಿಗೂ ಅನುಕೂಲವಾಗುವ ಕೆಲಸಗಳು ಸಂಗೀತ, ಸುಗಂಧ, ಸುಪ್ರಕಾಶಾದಿಗಳು. ೩ (ಅಥವಾ) ಕುಟುಂಬದ ಸುಖಾರ್ಥವಾದುದೆಲ್ಲವು ಸ್ವಾರ್ಥವು; ಪರಮಾತ್ಮಪ್ರೀತ್ಯರ್ಥವಾದುದೆಲ್ಲವು ಪರಾರ್ಥವು ; ಸರ್ವಪ್ರಜಾಸುಖಾರ್ಥವಾಗಿ ತೊಡಗುವ ದಾನಯಜ್ಞದೇವತಾಯತನಗವೇ ಮುಂತಾದ ಕರ್ಮವು ಮಿಶ್ರವು.

ಅ—ಮಿಶ್ರವೆಂಬುದೇ ವಾಸ್ತವವು. ಈಗಿಲ್ಲಿ ಹೇಳಿದ ಎಲ್ಲಾ ಕರ್ಮಗಳು ನಮಗೆ ಮಿಶ್ರವಾಗಿಯೇ ಇವೆ.

ಉ—ಸರಿ. ನಾವೂ ಮಿಶ್ರವಾಗಿಯೇ ಇರುವೆವಲ್ಲವೆ? ಈ ಮಧ್ಯಲೋಕಸ್ಥಿತಿಯೇ ನೀಚೋಚ್ಚ ಮಿಶ್ರವಾಗಿದೆ. ಸತ್ತ್ವತಮಃಕರ್ಮಗಳು ಮಿಶ್ರವಾಗಿರುವುದರಿಂದಲ್ಲವೆ ಇದು ರಜೋಲೋಕವೆನಿಸಿರುವುದು?

ಅ—ಆಗಲಿ. ಈ ಕರ್ಮವಿಭಾಗದಲ್ಲಿ ಒಂದರೊಳಗೊಂದು ಬೆರೆತುಕೊಂಡಿರುವುದರಿಂದ ಇದೀಶ್ವರಕರ್ಮ, ಇದು ಪ್ರಕೃತಿಕರ್ಮ, ಇದು ಜೀವಕರ್ಮ, ಎಂದು ಬೇರ್ಪಡಿಸಿಕೊಳ್ಳುವುದು ನಮ್ಮಂತಹವರಿಗೆ ಅಶಕ್ಯವಾಗಿದೆಯಲ್ಲವೆ?

ಉ—ಅಶಕ್ಯವೇ ಅಹುದು. ಆದರೆ ಅದಕ್ಕೋಸ್ಕರವೇ ಶಾಸ್ತ್ರಾಭ್ಯಾಸವು ಆವಶ್ಯಕವಾಗಿರುವುದು.

ಅ—ಇದುವರೆಗೆ ತಾವು ಹೇಳಿದುದು ಶಾಸ್ತ್ರೀಯವಾದ ವಿಭಾಗವೇ ಅಷ್ಟೆ? ನಮಗಿನ್ನೂ ಅದು ಅನುಭವಕ್ಕೆ ಬರಲಿಲ್ಲವಲ್ಲ?

ಉ—ಅಯ್ಯಾ! ಅನುಭವಕ್ಕೆ ಬರುವುದೆಂಬುದು ಬೇರೆ ವಿಷಯವಾಯ್ತು. ಅನುಭವವೇನು ಬಾಯಮಾತೆ? ಸಂಸ್ಕಾರವೇ ಇಲ್ಲದವರಿಗೆ ಅನುಭವವೆಲ್ಲಿಯದು? ಬಲವತ್ತರವಾದ ಅಭ್ಯಾಸಹೊರತು ಸಂಸ್ಕಾರವೆಲ್ಲಿ ಹುಟ್ಟುವುದು? ತಿಳಿದಂಶವನ್ನು ಮನದಲ್ಲಿ ಅನೇಕಾವೃತ್ತಿ ಮನನಮಾಡುತ್ತಲು, ಬಾಯಿಂದ ಉಚ್ಚರಿಸುತ್ತಲು, ಆ ಪ್ರಕಾರವೇ ನಡೆಯುತ್ತಲು, ಬಂದ ಹೊರತು ಅಭ್ಯಾಸವುಂಟಾಗದು. ಅದರಲ್ಲಿ ಅಕ್ಕರೆ (ಶ್ರದ್ಧೆ) ಇದ್ದ ಹೊರತು ಆ ವಿಷಯವು ಮನಸ್ಸಿಗೆ ಹಿಡಿಯುವುದೇ ಇಲ್ಲ. ಹೀಗೆ ಒಂದೊಂದಕ್ಕೆ ಇರುವ ಸಂಬಂಧವನ್ನರಿತು ಶ್ರದ್ಧೆಯಿಂದ ಪ್ರಯತ್ನಿಸಿದ ಹೊರತು ಇಷ್ಟಸಿದ್ಧಿಯಾಗದು. ಹೀಗಿರುವಾಗ ಸುಮ್ಮನೆ "ಎಲ್ಲಾ ಮಿಶ್ರವಾಗಿದೆ. ಅನುಭವಕ್ಕೆ ಬರಲಿಲ್ಲ" ವೆಂದರೆ ಯಾರೇನು ಮಾಡಲಾಪರು?

ಅ—ಆದರೆ ಇನ್ನೊಂದುಸಲ ದಯಮಾಡಿ 'ಇದೀಶ್ವರಕರ್ಮ, ಇದು ಜೀವಕರ್ಮ, ಇದು ಪ್ರಕೃತಿಕರ್ಮ" ಎಂಬ ಭೇದವನ್ನು ನಾವು ಮನನಕ್ಕೆ ತರುವ ಕ್ರಮವು ಹೇಗೋ? ಅದನ್ನು ವಿವರಿಸಬೇಕು.

ಉ—ಸರಿ. ಆದರೆ ಕೇಳಿರಿ. ಹಿಂದೆ (೭೯—೮೧) ಹೇಳಿದ ಜ್ಞಾನಶಕ್ತಿ ಕ್ರಿಯಾಶಕ್ತಿಗಳು ಪ್ರಪಂಚವೆಲ್ಲಾ ಭಾಗದಲ್ಲಿಯೂ ತುಂಬಿವೆ ಎಂಬ ವಿಷಯವು ನೆನಪಿನಲ್ಲಿದೆಯಷ್ಟೆ? ಈಗ ಆ ಕ್ರಿಯಾಶಕ್ತಿಯಲ್ಲಿ ನಿತ್ಯಕ್ರಿಯೆ ನೈಮಿತ್ತಿಕಕ್ರಿಯೆ ಎಂಬ ಎರಡು ಭಾಗವುಂಟೆಂದು ಭಾವಿಸಿರಿ. ನಿತ್ಯಕ್ರಿಯೆ

ಯೆಂಬುವೆಲ್ಲವು ಜಗದೀಶ್ವರನದು. ನೈಮಿತ್ತಿಕಕ್ರಿಯೆಯು ಚಿದಚಿತ್ಪ್ರಕೃತಿಗೆ ಸೇರಿದ ಈ ಚರಾಚರವಸ್ತುಗಳಲ್ಲಿ ಕಾಣಬರುವುದು. ಸ್ವಾಭಾವಿಕವೆನಿಸಿರುವುದು. ಅದರಲ್ಲಿ ಜ್ಞಾನಸಹಿತ ಕ್ರಿಯಾಭಾಗವೆಲ್ಲವು ಚಿದ್ಭಾಗಕ್ಕೆ, ನಿಸ್ಸಂಜ್ಞವಾದ ಕೇವಲ ಕ್ರಿಯಾಭಾಗವು ಅಚಿತ್ಪ್ರಕೃತಿಗೆ (ಜಡಕ್ಕೆ), ಸೇರಿದೆ ಯೆಂದು ವಿಂಗಡಿಸಿಕೊಳ್ಳಿರಿ.

ಆ—ಅಲ್ಲಿಯೇ ಸಂದೇಹವು. 'ಎಲ್ಲಿ ಯಾವ ಕೆಲಸವನ್ನು ನೋಡಿದರು ಸ್ವಾಭಾವಿಕವಾಗಿಯೇ ಕಾಣಬರುವುದು. ಸ್ವಭಾವಕ್ಕೆ ನಿಮಿತ್ತವನ್ನು ಕಲ್ಪಿಸುವುದು ಹೇಗೆ ?' ಎಂದು.

ಉ—ಹಾಗಲ್ಲವಯ್ಯಾ ! ಕೇಳು. ಈ ಪ್ರಪಂಚವನ್ನು ಚರ, ಅಚರ ಎಂದು ಎರಡಾಗಿ ವಿಂಗಡಿಸು. ಅದರಲ್ಲಿ ಚರಕ್ಕೆ ಗತಿಯು ಸ್ವಾಭಾವಿಕವು, ಅಚರಕ್ಕೆ (ಸ್ಥಿರಕ್ಕೆ) ಸ್ಥಿತಿಯು ಸ್ವಾಭಾವಿಕವು ; ಈ ಗತಿಸ್ಥಿತಿಗಳು ಅವಕ್ಕೆ ನೈಜವಾದರೂ ಸಾರ್ವಕಾಲಿಕವಲ್ಲ. ಅವರಲ್ಲಿ ಕೆಲವಕ್ಕೆ ಕಾಲಾದಿ ನಿಮಿತ್ತವಿಶೇಷದಿಂದ ಆ ಗತಿಸ್ಥಿತಿಗಳು ವ್ಯತ್ಯಸ್ತವಾಗುವುದುಂಟು. ಉದಾ—ಈಗ ಈ ಭೂಮಿಯ ರೇಣುಗಳು ಸ್ವಾಭಾವಿಕವಾಗಿ ಅಚಲಗಳಷ್ಟೆ? ಇದಕ್ಕೆ ಗತಿಯು ಗಾಳಿ ಮುಂತಾದ ನಿಮಿತ್ತವಿಲ್ಲದೆ ಉಂಟಾಗದು. ಆ ನಿಮಿತ್ತವು ತೊಲಗಿದರೆ ಸ್ಥಿತಿಯೇ (ಕದಲದೆ ನಿಲ್ಲುವುದೇ) ಅದಕ್ಕೆ ಸಹಜವಾಯ್ತು. ತೇಜೋಭಾಗವನ್ನು ನೋಡಿರಿ. ಈ ತೇಜಃಪರಮಾಣುಗಳಿಗೆ ಯಾವಾಗಲೂ ಊರ್ಧ್ವಗತಿಯೇ ಸಹಜವು. ಅವುದಾದರೂ ಒಂದು ತಡೆಯಿಲ್ಲದೆ ನಿಲ್ಲುವುದೇ ಇಲ್ಲ. ಆದರಿಂದ ಇದಕ್ಕೆ (ನಿಲುಕಡೆಯು) ಸ್ಥಿತಿಯು ನಿಮಿತ್ತದಿಂದುಂಟಾಗುವುದು. ಆ ತಡೆಯು ತಪ್ಪಿದರೆ ಗತಿಯೇ ಸಿದ್ಧವು.

"ಆಕಾಶಂ ಪವನೋಽನ್ವೇತಿ ಜ್ಯೋತಿಸ್ತಮನು ಗಚ್ಛತಿ ।
ತೇಷಾಂತ್ರಯಾಣಾಮೇಕತ್ವಾತ್ ದ್ವಯಂ ಭೂಮೌ ಪ್ರತಿಷ್ಠಿತಂ"

(ಆಕಾಶವನ್ನು ಗಾಳಿ ಅನುವರ್ತಿಸುವುದು, ತೇಜಸ್ಸು ಅದನ್ನು ಅನುಸರಿಸುವುದು. ಇವು ಮೂರು ಒಂದಾಗಿ ಮೇಲೆ ಇರುವುವು. ಭೂಮಿಯು ಜಲವು ಕೆಳಗೆ ನಿಲ್ಲುವುದು. ಎಂದು ಭಾರತ ಶಾಂತಿ ೧೮॥ ಅ) ಆದುದರಿಂದ ಲೋಕದಲ್ಲಿ ಚಲಸ್ವಭಾವವುಳ್ಳ ಪದಾರ್ಥಕ್ಕೆ ಗತಿಯು ಸಹಜವು. ಸ್ಥಿತಿಯು ನಿಮಿತ್ತಜವು. ಅಚಲ ಸ್ವಭಾವವುಳ್ಳ ಪದಾರ್ಥಕ್ಕೆ ಗತಿಯೇ ನಿಮಿತ್ತಜವು,

ಸ್ಥಿತಿಯು ಸಹಜವು. ಈ ಗತಿಸ್ಥಿತಿಗಳು ಪರಸ್ಪರ ವಿರುದ್ಧಗಳಾದುದರಿಂದ ಪ್ರಬಲ ದುರ್ಬಲಭಾವಕ್ಕೆ ಒಳಗಾಗಿಯೇ ನಮಗೆ ಗೋಚರವಾಗುತ್ತಿವೆ. ಉದಾ—ಚಂದ್ರನಕ್ಷತ್ರದೀಪಾದಿಗಳು ಇರುಳಲ್ಲಿರುವಂತೆ ಹಗಲಲ್ಲಿಯೂ ಇದ್ದರೂ ಆ ಬೆಳಕನ್ನು ಮುಚ್ಚುವಂತಹ ಸೂರ್ಯನ ಪ್ರಬಲವಾದ ಪ್ರಕಾಶದಿಂದ ತಡೆಯಲ್ಪಟ್ಟು ಕಾಣಬಾರವು, ಹೀಗೆಯೇ ವಾಯ್ವಾದಿಗಳಲ್ಲಿರುವ ಕ್ರಿಯೆಗಳು ತಡೆಗಳುಂಟಾದೆಡೆಗಳಲ್ಲಿ ತೋರಬರುವುದಿಲ್ಲ. ಅಷ್ಟುಮಾತ್ರಕ್ಕೆ ಆ ವಸ್ತುವೇ ಇಲ್ಲವೆನ್ನಕೂಡದು. ತತ್ತತ್ಸ್ವಭಾವದ ನಿಯಮವನ್ನು ಅನುಸರಿಸಿ ಶಾಸ್ತ್ರಲೋಕಾನುಭವಬಲದಿಂದ ಅನುಮೇಯಿಸಿ ತಿಳಿದುಕೊಳ್ಳಬೇಕು.

ಅ—ಆ ಸ್ವಭಾವದ ನಿಯಮವೇನಿದೆಯೋ ಸ್ವಲ್ಪ ಅಪ್ಪಣೆಯಾಗಬೇಕು?

ಉ—ಮೃಲ್ಲೋಷ್ಟಪಾಷಾಣಾದಿಗಳನ್ನು ಮೇಲಕ್ಕೆ ಕೈಯಿಂದೆಸೆದರೆ ನಮ್ಮ ಕೈಯ್ಯಲ್ಲಿದ್ದ ಕ್ರಿಯಾಶಕ್ತಿಯು ಅವುಗಳಲ್ಲಿ ಆಹಿತವಾಗಲು ಅವು ಆ ಕ್ರಿಯಾವೇಗವಿರುವಷ್ಟು ದೂರ ಹೋಗಿ ಬಳಿಕ ತಮ್ಮಲ್ಲಿರುವ ಗುರುತ್ವಕ್ಕೆ ತಕ್ಕಂತೆ ಭೂಮಿಯ ಆಕರ್ಷಣಶಕ್ತಿಯಿಂದ ಮರಳಿ ನೆಲವನ್ನು ಸೇರುವುವು. ಈಗಿಲ್ಲಿ ಆ ಮೃಲ್ಲೋಷ್ಟಾದಿಗಳಿಗೆ ಊರ್ಧ್ವಗತಿಯು ನಮ್ಮ ನಿಮಿತ್ತದಿಂದುಂಟಾದುದರಿಂದ ನೈಮಿತ್ತಿಕವಾಯ್ತು. ಅಧೋಗತಿಯು ಸ್ವಾಭಾವಿಕವಾಯ್ತು.

ಹೀಗೆಯೇ ಜಲಕ್ಕೆ ಸೂರ್ಯಾಗ್ನಿ ಸಂಬಂಧದಿಂದ ಉಷ್ಣಶಕ್ತಿಯುಂಟಾದರು ಅದು ಸಹಜವಲ್ಲದುದರಿಂದಲೇ ಆ ಸಂಬಂಧವು ತಪ್ಪಲು ಮರಳಿ ತಾನಾಗಿಯೇ ತಣ್ಣನಾಗುವುದು ಸಹಜವು.

ಅಗ್ನಿಗೆ ಊರ್ಧ್ವಗತಿಯೂ, ವಾಯುವಿಗೆ ತಿರ್ಯಗ್ಗತಿಯು, ಸ್ವಾಭಾವಿಕವಾಯ್ತಷ್ಟೆ? ಇದಕ್ಕೆ ವಿಪರೀತವು ಕಾಣಬಂದಲ್ಲಿ ಅದಕ್ಕೆ ತಕ್ಕ ನಿಮಿತ್ತವಿದ್ದೇ ಇರುವುದೆಂದೂಹಿಸಬೇಕು.

ಹೀಗೆ ಈ ಪೃಥಿವ್ಯಾದಿಭೂತಗಳಲ್ಲಿ ಕಾಣಬರುವ ಈ ಸಹಜಶಕ್ತಿಯು ಅಚಿಂತ್ಯಾದ್ಭುತಶಕ್ತಿಯುಳ್ಳ ಆ ಪರಮಾತ್ಮನಿಂದ ಅವಕ್ಕೆ ಸೃಷ್ಟ್ಯಾದಿಯಲ್ಲಿ ನಿಯಮಿಸಲ್ಪಟ್ಟಿರುವ ಮೇರೆಗೆ ಯಾವಾಗಲು ಏಕರೂಪವಾಗಿ ನಡೆಯುತ್ತಿರುವುದರಿಂದಲೇ ಸ್ವಭಾವ ಸ್ವಭಾವ ಎಂಬ ರೂಢಿಯುಂಟಾಗಿದೆಯಷ್ಟೆ?

ಈ ಸ್ವಭಾವವು ಯಾರಿಗೆ ಸೇರಿದೆ ಯೆನ್ನಬೇಕು ? ಅದೇ ಈಶ್ವರನದು. (ಇತೀಯಂ ಮೇ ಭಿನ್ನಾ ಪ್ರಕೃತಿ ರಷ್ಟಧಾ. ಗೀ ೭-೪)

• ಅ-ಅಯಸ್ಕಾಂತಾದಿ ಪದಾರ್ಥಗಳಲ್ಲಿ ಕೂಡ ಅದ್ಭುತಶಕ್ತಿಯು ಕಾಣಬರುವುದಷ್ಟೆ? ಅದೀಶ್ವರನದೋ ? ಅದೂ ಅಚಿಂತ್ಯವಲ್ಲವೆ ? ಅದ್ಭುತವಲ್ಲವೆ?

ಉ-ಅಹುದು. ಆದರೆ ಅಷ್ಟುಮಾತ್ರವಲ್ಲ. ಇನ್ನು ಸೂರ್ಯಕಾಂತ ಮೃತಸಂಜೀವಿನೀ ಕಾಲಕೂಟ ಕಾಮಧೇನು ಕಲ್ಪವೃಕ್ಷ ಮುಂತಾದವುಗಳ ಶಕ್ತಿಯು, ಅಗ್ನಿವಾಯು ಜಲಾದಿಗಳ ವೀರ್ಯಗಳು, ಬ್ರಹ್ಮಾದಿ ಸರ್ವ ದೇವತೆಗಳ ಅಧಿಕಾರಶಕ್ತಿ ಮೊದಲಾದುದು, ನಮ್ಮಲ್ಲಿರುವ ಪ್ರಾಣೇಂದ್ರಿಯಮನೋಬುದ್ಧಿಗಳ ಕ್ರಿಯಾಶಕ್ತಿಯೂಕೂಡ ಆ ಪರಮಾತ್ಮನ ಅನಂತಾನಂತ ಶಕ್ತಿಗಳ ಕೋಟಿಕೋಟಿತಮಲವಂಶದಲ್ಲಿ ಏಕದೇಶವಾಗಿದೆ ಯೆಂದು ಭಾವಿಸಬೇಕು. ಹಿಂದೆ ಹೇಳಿದ (ಪು. ೭೫-೭೬) ಈಶ್ವರವಿಭೂತಿಯನ್ನು ಮತ್ತೊಂದು ಸಲ ಮನನಮಾಡಿರಿ.

ಅ-ಸರಿ. ಈ ಸ್ವಾಭಾವಿಕವಸ್ತುಗಳಲ್ಲಿ ಆತನ ಕ್ರಿಯಾಶಕ್ತಿ ಇದ್ದರೂ ಇರಲಿ. ಈಗ ನಾವು ಹೊಸದಾಗಿ ಒಂದಕ್ಕೊಂದು ಪದಾರ್ಥವನ್ನು ಬೆರಸುವುದರಿಂದಲೂ, ಪಾಕಾದಿಸಂಸ್ಕಾರ ಮಾಡುವುದರಿಂದಲೂ, ಕಾಲಪರಿಣಾಮವಶದಿಂದಲು, ಈ ಪ್ರಪಂಚದಲ್ಲಿರುವ ಸರ್ವವಸ್ತುಗಳಲ್ಲಿಯೂ ಸಹಜವಾಗಿ ಬೇರೆಬೇರೆ ಗುಣಗಳು ಉಂಟಾಗುವವಷ್ಟೆ? ಅದನ್ನೂ ಈಶ್ವರಶಕ್ತಿಯೆನ್ನುವುದು ಹೇಗೆ ?

ಉ-ನೀನಿನ್ನೂ ಹಿಂದೆ ಹೇಳಿದ ಜ್ಞಾನಶಕ್ತಿ, ಕ್ರಿಯಾಶಕ್ತಿ, ಜ್ಞಾನಸಹಿತ ಕ್ರಿಯಾಶಕ್ತಿ, ಯೆಂಬಂಶಗಳನ್ನು ಚೆನ್ನಾಗಿ ಮನನಮಾಡುತ್ತಬರಬೇಕು. ಈ ಪ್ರಪಂಚದಲ್ಲಿ ಯೆಲ್ಲಿಯೆಲ್ಲಿಯು ಈಗಿರುವುವೇ ಆಗಲಿ, ಇನ್ನು ಮುಂದೆ ಉಂಟಾಗುವುದೇ ಆಗಲಿ, ಯಾವುದೊಂದು ಅತ್ಯಲ್ಪಕ್ರಿಯೆಯಾದರೂ ನಿರ್ನಿಮಿತ್ತವಾಗಿಯು, ನಿರಾಲಂಬವಾಗಿಯೂ, ಉಂಟಾಗದೆಂದು; ಕಾರಣಗತವಾದ ಕ್ರಿಯಾಶಕ್ತಿಯೇ ಬಗೆಬಗೆಯಾಗಿ ಕಾರ್ಯದಲ್ಲಿ ಕಾಲಾನುಸಾರವಾಗಿ ಕಾಣಿಸಿಕೊಳ್ಳುವುದು ಪ್ರಸಿದ್ಧವಾಗಿರುವುದರಿಂದ ಈ ಚರಾಚರ ಪ್ರಪಂಚ

ದಲ್ಲಿ ತೋರಿಬರುವ ಸರ್ವ ಶಕ್ತಿಗಳಿಗೂ ಆಧಾರವಾದುದು ಆ ಪರಮಾತ್ಮನ ಅಚಿಂತ್ಯಶಕ್ತಿಯೊಂದೇ ಎಂದು; ಆ ಶಕ್ತಿಯ ಒಂದೇ ಅಂಶವೇ ಸಮುದ್ರಪ್ರಾಯವಾಗಿದೆ ಯೆಂದು; ಆ ಬ್ರಹ್ಮಾದಿದೇವತೆಗಳು ಮೊದಲುಗೊಂಡು ಸರ್ವ ಜೀವರ ಜ್ಞಾನೈಶ್ವರ್ಯಕ್ರಿಯಾಶಕ್ತಿಗಳೆಲ್ಲವೂ ಆ ಸಮುದ್ರದ ಒಂದು ಬಿಂದುಪ್ರಾಯವೆಂದು; ತಿಳಿಯಬೇಕು. ಆದರೆ ಅದು ಸ್ವರೂಪಯೋಗ್ಯತಾ ಕಾಲದೇಶಾದಿಗಳನ್ನು ಮೀರದೇ ಒಂದೇ ಮೇರಿಯಲ್ಲಿರುವುದರಿಂದ ಅದಕ್ಕೆ ಸಹಜಶಕ್ತಿಯೆಂಬ ಹೆಸರುಂಟಾಗಿದೆ. ಆ ಸ್ವಭಾವದಲ್ಲಿ ನಾವು ಕೆಲವು ಭಾಗವನ್ನು ಅಭ್ಯಾಸಬಲದಿಂದ ವೃದ್ಧಿ ಮಾಡಿಕೊಳ್ಳಬಹುದಾದ ವಿದ್ಯಾಶಿಲ್ಪಾದಿ ವಿಷಯವೂ ಉಂಟೆಂದು, ಅದಕ್ಕೆ ನಿಸರ್ಗವೆಂಬ ನಾಮಾಂತರವಿದೆಯೆಂದು, ಈ ಭೇದವು ಹಿಂದೆ [ಪುಟ ೨೦ ಲ್ಲಿ] ಹೇಳಿದೆ ನೋಡಿರಿ.

ಆ—ಅಹುದು. "ನಿಸರ್ಗಃ ಸುದೃಢಾಭ್ಯಾಸಜನ್ಯಃ ಸಂಸ್ಕಾರ ಉಚ್ಯತೇ". ಎಂಬ ಶ್ಲೋಕದಲ್ಲಿ ಸಂಸ್ಕಾರವೆಂದು ಹೇಳಿ ಯಿದೆ. ಆದರೆ ಅದನ್ನು ನಾವು ಕಾಲಾನುಸಾರವಾಗಿ ಕಲಿತಷ್ಟು ವೃದ್ಧಿಮಾಡಿಕೊಳ್ಳಬಹುದು. ಆದರಿಂದ ಅದು ನಮ್ಮ ಶಕ್ತಿಯಾಯ್ತಲ್ಲವೆ ?

ಉ—ಸರಿ. ಇನ್ನೇನು? ಆ ಸಂಸ್ಕಾರದಿಂದ ಉಂಟಾದ ಕ್ರಿಯಾಶಕ್ತಿಯೇ ಈ ಚರಾಚರವಾದ ಜಡವಸ್ತುಗಳಲ್ಲಿಯು, ಉಚ್ಚಾವಚವಾದ ಈ ಸರ್ವ ಪ್ರಾಣಿವರ್ಗದಲ್ಲಿಯು, ವ್ಯಾಪಿಸಿಕೊಂಡು ತುಂಬಿ ತುಳುಕುತ್ತ ಇರುವುದು. ಅದೇ ಈಗ ಮನುಷ್ಯಗೆ ಇಷ್ಟೊಂದು ಅಹಂಕಾರದ ಕ್ರಿಯಾಶಕ್ತಿಯನ್ನು ಹೆಚ್ಚಿಸಿರುವುದಲ್ಲದೆ ತತ್ಪೂರ್ವದ ಸ್ವಾಭಾವಿಕಶಕ್ತಿಯನ್ನು, ತದಾಧಾರನಾದ ಆ ಸ್ವಾಮಿಯ ಅಚಿಂತ್ಯಾದ್ಭುತಗಳಾದ ಮಹಿಮೆಗಳನ್ನು, ಮರೆಯಿಸಿ ಇರುವುದು.

ಆ—ಇನ್ನು ಸಂಸ್ಕಾರವೆಂಬುವದರ ಮಹಿಮೆ ಮತ್ತೇನಿದೆ? ಪೂರ್ವದ ಸ್ವಭಾವ ಸಂಬಂಧವಾದ ಗುಣಗಳನ್ನು ಕಳೆದು ಆ ಸ್ವಭಾವವನ್ನು ಬದಲಾಗಿ ಮಾಡುವುದೇ ಅಲ್ಲವೆ ?

ಉ—ಅಹುದು. ಆದರೆ ಅನಾದಿಯಾದ ಸ್ವಭಾವ ಯೋಗ್ಯತಾ ಕಾಲದೇಶಾದಿಗಳಿಗೆ ವಿರುದ್ಧವಾಗಿ ಸಂಸ್ಕರಿಸಲು ಶಕ್ಯವೇ? ಕಟ್ಟುಬಣ್ಣದಿಂದ

ಹುಟ್ಟುಬಣ್ಣವು ಹೋಗುವುದೇ ? ಪದಾರ್ಥಗಳ, ಪ್ರಾಣಿಗಳ, ಜನ್ಮಕರ್ಮಗಳಿಗೆ ಅನುಗುಣವಾದ ಸಂಸ್ಕಾರ ಮಾತ್ರವೇ ಸಫಲವಾಗುವುದು. ಆ ಜನ್ಮಾದಿಸ್ವಭಾವಕ್ಕೆ ವಿರುದ್ಧಾಚರಣವು ಆ ಸ್ವರೂಪವನ್ನೇ ಹಾಳುಮಾಡುವುದು. ಶಾಸ್ತ್ರೀಯವಾಗಿ ಸಂಸ್ಕಾರವು ನಡೆದರೆ ಅಪೂರ್ವವಾದ ಉತ್ತಮಗುಣವುಂಟಾಗುವುದು. ಉದಾ—ಈಗ ಪ್ರತಿಮಾದಿಗಳಲ್ಲಿ ಪ್ರತಿಷ್ಠಾಸಂಪ್ರೋಕ್ಷಣಾದಿಗಳಿಂದ ಒಂದು ಅಹಿತಶಕ್ತಿ ಹುಟ್ಟುವುದಷ್ಟೆ ? ಆ ಶಕ್ತಿಯು ಕಾಲ ದೇಶ ಕರ್ತ್ರಾದಿಗಳ ಬಲವನ್ನು ಅನುಸರಿಸಿಯೇ ಕಾಣಿಸಿಕೊಳ್ಳುವುದುಕೂಡ ಅನುಭವಸಿದ್ಧವಾಗಿದೆ.

ಅ—ಸರಿ. ಈ ಕರ್ಮ ವಿಷಯದಲ್ಲಿ ಇನ್ನೊಂದು ಸಂದೇಹವಿದೆ. ಯಾವಕರ್ಮವೂ ಕಾಲವನ್ನು ಮೀರಿ ನಡೆಯದು. ಹಾಗೆ ನಡೆಯಿಸಲು ಶಕ್ಯವು ಅಲ್ಲವಷ್ಟೆ? ಹಾಗಾದಮೇಲೆ ಸೃಷ್ಟ್ಯಾದಿ ಸರ್ವ ಕ್ರಿಯೆಗಳನ್ನೂ ನೆರವೇರಿಸುವ ಶಕ್ತಿಯು ಕಾಲಕ್ಕೇ ಸೇರಿದುದಾಯಿತು. ಹೀಗೆ ಕಾಲವೇ ಸರ್ವಾಧಾರವೆಂದು ಪ್ರಸಿದ್ಧವಾಗಿರುವಾಗ ಬೇರೆಬೇರೇ ಶಕ್ತಿಗಳನ್ನೇತಕ್ಕೆ ಒಪ್ಪಬೇಕು? ಎಲ್ಲವೂ ಕಾಲದ ಮಹಿಮೆ, ಕಾಲದಶಕ್ತಿಯಿಂದರಾಯಿತಲ್ಲವೆ?

ಉ—ಹಾಗೆಯೆ ? ಆದರೆ ನಿನಗೆ ಕಾಲದ ಸ್ವರೂಪವು ತಿಳಿದಿದೆಯೊ ?

ಅ—ಆಹ ! ಅದು ತಿಳಿಯದೇ ಏನು? ಬೈಗು ಬೆಳಗು ಆಗುವುದನ್ನು ಮಕ್ಕಳುಕೂಡ ಬಲ್ಲರಲ್ಲವೆ ? ಈಗೆಲ್ಲರು ಗಡಿಯಾರವನ್ನಿಟ್ಟುಕೊಂಡು ಅತಿಸೂಕ್ಷ್ಮಕಾಲವನ್ನು ಕೂಡ ತಿಳಿಯುತ್ತಿದ್ದಾರೆ.

ಉ—ಎಲ್ಲಿ? ಆ ಸೂಕ್ಷ್ಮಕಾಲವಾವುದೊ? ಅದನ್ನು ಸ್ವಲ್ಪ ವಿವರಿಸು. ನೋಡುವ.

ಅ—ರೆಪ್ಪೆಹಾಕುವಕಾಲ, ಬೆರಲಂ ಚಿಟಿಕಿಸುವಕಾಲ, ಅಕಾರವನ್ನುಚ್ಚರಿಸುವ ಕಾಲವು, ಒಂದೆಂದೆಣಿಸುವಷ್ಟು ಕಾಲವು, ಹೀಗಿವೆಲ್ಲವು ಸೂಕ್ಷ್ಮವು.

ಉ—ಈ ರೆಪ್ಪೆ ಬಡಿಯುವುದು, ಚಿಟಿಕೆಹಾಕುವುದು, ಒಂದು ಎಂದೆಣಿಸುವುದು, ಎಂಬುದಿದೆಲ್ಲವು ಕ್ರಿಯೆಯೊ ? ಕಾಲವೊ ? ಚೆನ್ನಾಗಿ ಆಲೋಚಿಸು.

ಅ—ರೆಪ್ಪೆಬಡಿಯುವುದು ಕ್ರಿಯೆಯಾದರೂ ಆ ಕ್ರಿಯೆ ಮುಗಿಯುವಷ್ಟು ಹೊತ್ತಿಗೆ ಒಂದು ಕಾಲವೆಂದು ವ್ಯವಹಾರವುಂಟಲ್ಲವೆ ?

ಉ—ಸರಿ, ಅದು ಸಂಖ್ಯಾದಿಗ್ದೇಶಸಂಯೋಗಾದಿನಿಮಿತ್ತದಿಂದ ನಾವಿಟ್ಟು ಕೊಳ್ಳುವ ಸಂಕೇತವಾದ ಹೆಸರಾಯ್ತಲ್ಲದೆ ಕ್ರಿಯೆಯನ್ನು ಬಿಟ್ಟು ಕಾಲವನ್ನು ಬೇರೆಯಾಗಿ ಎಲ್ಲಿ ಅನುಭವಿಸುವೆಯೋ ? ಇನ್ನೂ ಚೆನ್ನಾಗಿ ಆಲೋಚಿಸಯ್ಯಾ!

ಅ—ಆದರೆ. ಉದಯ ಅಸ್ತ, ಹಗಲು ಇರುಳು, ತಿಂಗಳು ವರ್ಷ, ಇವೆಲ್ಲವು ಕಾಲವಲ್ಲದೆ ಕ್ರಿಯೆ ಯಾಗುವುದೆ ?

ಉ—ಸರಿ. ಹಾಗಾದರೆ ನಿನಗಿನ್ನು ಕ್ರಿಯಾಸ್ವರೂಪವೇ ಮನನಕ್ಕೆ ಬರಲಿಲ್ಲವೆಂದು ತೋರುತ್ತದೆ. ಅದರಿಂದ ಸಾವಧಾನದಿಂ ಗ್ರಹಿಸು.

ಉದಯ ಎಂದರೆ ಸೂರ್ಯಬಿಂಬವು ಕಾಣಿಸಿಕೊಳ್ಳುವುದಾಯ್ತು. ಅಸ್ತ ಎಂದರೆ ಅದು ಕಾಣದಿರುವುದಾಯ್ತು. ಹಾಗೆಯೆ ರಾಶಿಚಕ್ರವನ್ನು ಒಂದು ಸಲ ಸುತ್ತುವುದು ಮುಗಿದರೆ ಒಂದು ದಿನವು, ಮೂವತ್ತು ಆವೃತ್ತಿ ಸುತ್ತಿದರೆ ಒಂದು ತಿಂಗಳು, ಇದು ೧೨ ಸಲವಾದರೆ ಒಂದುವರ್ಷವು, ಹೀಗೆಂದು ಕ್ರಿಯೆಗಳನ್ನು ಎಣಿಸಿಕೊಳ್ಳುವುದೊಂದು ವ್ಯಾಪಾರವಾಯ್ತಲ್ಲದೆ ಕಾಲಸ್ವರೂಪವೆಲ್ಲಿ ವ್ಯಕ್ತವಾಯ್ತು ?

ಅ—ಆದರೆ ಕಾಲವಿನ್ನಾವುದೋ ತಾವೇ ಹೇಳಬೇಕು ?

ಉ—ಆದರೆ ಕೇಳು—ಕಾಲವು ನಿತ್ಯವು, ವ್ಯಾಪಕವು, ಸರ್ವಾಧಾರವು. ಆಕಾಶದಂತೆಯೇ ಅಖಂಡವು ಏಕರೂಪವು ಆದುದು. ದಿಕ್ಕಿನಂತೆ ಹಿಂದು ಮುಂದು ಎಂಬ ವ್ಯವಹಾರಕ್ಕೆ ವಿಷಯವಾಗಿದೆ. ಆಕಾಶವು ಹೇಗೆ ಮಹತ್ಪರಿಮಾಣವುಳ್ಳುದಾಗಿವೆಯೋ ಕಾಲವು ಹಾಗೆಯೇ ಮಹತ್ಪರಿಮಾಣಕವು. ಕೊನೆ ಮೊದಲು ಇಲ್ಲದುದು. ಇದೇ ಆ ಪರಮಾತ್ಮನ ಮುಖ್ಯತಮವಾದ ವಿಭೂತಿ ಎಂದು ಭಾವಿಸು.

ಅ—ಆದರೆ ಕಾಲಬಂದುದು, ಇನ್ನೂ ಕಾಲ ಬರಲಿಲ್ಲ, ಒಳ್ಳೆಯಕಾಲ, ಕೆಟ್ಟಕಾಲ, ಎಂದು; ಕಾಲಕ್ಕೆಎಲ್ಲರು ಒಳಪಟ್ಟಿರುವರೆಂದು; ಹೇಳುವರಷ್ಟೆ ಈ ರೂಢಿಯು ಪ್ರಾಮಾಣಿಕವಲ್ಲವೊ ?

ಉ—ಅಲ್ಲದೆ ಯೇನು ? ಎಲ್ಲವು ಪ್ರಾಮಾಣಿಕವು. ಗಾಳಿಯಕಾಲ, ಮಳೆಗಾಲ, ಮಂಜಿನ ಕಾಲ, ಬಿಸಿಲ ಕಾಲ, ಬಿತ್ತುವ ಕಾಲ ಬೆಳೆವಕಾಲ, ಕುಯ್ಯುವಕಾಲ, ಸೃಷ್ಟಿಕಾಲ, ಪ್ರಳಯಕಾಲ, ಭೂತಕಾಲ ಭವಿಷ್ಯತ್ಕಾಲ ವರ್ತಮಾನಕಾಲ, ಎಂದು ಕಾಲಶಬ್ದದ ಹಿಂದೆ ಒಂದು ಕರ್ಮಬೋಧಕವಾದ ವಿಶೇ

ಷಣದೊಡನೆಯೇ ವ್ಯವಹರಿಸುವೆವಲ್ಲವೆ ? ಹಾಗೆ ಕ್ರಿಯೆಗಳಿಗೆ ಹೆಸರಿಂಡಲ್ಕಿಷ್ಟವಿಲ್ಲದ ಕಡೆ ಚಿರಕಾಲ ಶೀಘ್ರಕಾಲ ಎಂದು; ಹುಟ್ಟಿದುದು ಮೊದಲು ಸಾಯುವವರೆಗೆ ಪ್ರಾಣಧಾರಣರೂಪವಾದ ಕ್ರಿಯಾಸಂತಾನಕ್ಕೇ ಅಲ್ಲವೆ ಆಯುಸ್ಸೆಂದು, ಜೀವಿತಕಾಲವೆಂದು; ಹೇಳುವೆವು. ಆ ಜನನಮರಣಗಳ ನಡುವೆ ಅನೇಕ ಶತಸಹಸ್ರವ್ಯಾಪಾರಗಳು—ಕ್ರಿಯಾರೂಪಗಳು-ಬಲುದೊಡ್ಡದೊಡ್ಡದಾಗಿಯು, ಪಿರಿದುಪಿರಿದಾಗಿಯು, ತೋರಿಬರಲು ಅದಕ್ಕೆ ಪೂರ್ಣಾಯುಸ್ಸೆಂದು, ಚಿರಕಾಲವೆಂದು; ಅವೇವ್ಯಾಪಾರಗಳು ಅತ್ಯಲ್ಪಗಳಾಗಿ ಕಿರಿದುಕಿರಿದಾಗಿ ತೋರಿಬರಲು ಅದಕ್ಕೆ ಅಲ್ಪಾಯುಸ್ಸೆಂದು, (ಬೇಗನೆ) ಶೀಘ್ರಕಾಲವೆಂದು; ಹೇಳುವೆವಲ್ಲದೆ ಯಾವುದೊಂದು ಕ್ರಿಯೆಯು ಮನಕ್ಕೆ ತೋರಿಬಾರದಾಗ ಕಾಲದ ಮಾತೆಲ್ಲಿಯದು? ನೋಡಿರಿ.

ಅ—ಒಂದು ಕ್ಷಣವಿರು, ಒಂದು ನಿಮಿಷ ಸುಮ್ಮನಾಗು. ಕಾಲ ಬರಲಿ, ಎಂಬಲ್ಲಿ ಕಾಲವು ಕ್ರಿಯೆಯಂ ಬಿಟ್ಟು ಸುಮ್ಮನಿರುವ ಸ್ಥಿತಿಯೇ ಅಲ್ಲವೆ ?

ಉ—ಆಗಲಿ. ಅದೇನು? ಇರ್, ಆಗು, ಬರ್, ಎಂಬಿವು ಧಾತುಗಳಲ್ಲವೊ?

"ನಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ‖ ಗೀ ೩—೫. (ಆವ ಪ್ರಾಣಿಯು ಒಂದು ಕ್ಷಣವಾದರು ಆವುದೊಂದು ಚೇಷ್ಟೆಯೂ ಇಲ್ಲದೆ ಇರಲಾರದು) ಹಿಂದೆ [ಪು ೮೨] ಹೇಳಿದ ಅಕರ್ಮಕಕ್ರಿಯಾವಿಚಾರವಂ ನೋಡಿರಿ. ಅಂತು ಕರ್ಮದ ಹಿಂದೆ ಕಾಲವು, ಕಾಲದ ಹಿಂದೆ ಕರ್ಮವು, ಜಡೆ ಹಣೆದಂತಿರುವುದು. ಈ ಕಾಲಕರ್ಮಗಳ ಸಂಯೋಗದಿಂದಲೇ ಸರ್ವ ಗುಣಭೇದಗಳು ತೋರಿಬರುವುವು.

ಅ—ಆದರೆ ಇನ್ನು ಕಾಲದ ಸ್ವರೂಪವನ್ನು ಕಂಡುಕೊಳ್ಳುವುದು ಹೇಗೆ?

ಉ—ಅದು ಸೂಕ್ಷ್ಮವಿಷಯವಾದುದರಿಂದ ಈ ಕರ್ಮಮೂಲವಾಗಿಯೇ ಮನನಮಾಡಿಮಾಡಿ ಗ್ರಹಿಸುತ್ತ ಬರಬೇಕು. "ಕಲನಾತ್ಕಾಲ ಉಚ್ಯತೇ," "ಕಾಲಃ ಕಲಯತಾಮಹಮ್, ಅಹಮೇವಾಕ್ಷಯಃ ಕಾಲಃ ೩೩—೧೦ ಕಾಲೋಸ್ಮಿ ಲೋಕಕ್ಷಯಕೃತ್ ಪ್ರವೃದ್ಧಃ" ೩೨—೧೧ ಗೀ [ಎಲ್ಲವನ್ನೂ ರಚಿಸುವುದರಿಂದ ಕಾಲನೆಂದು, ನಾನೇ ಕಾಲಸ್ವರೂಪನೆಂದು.] ಹೇಳಿರುವುದರಿಂದ ಪರಮಾತ್ಮನಲ್ಲಿಯೇ ಮೊದಲು ಕಾಲಶಬ್ದವು ರೂಢವು. ಇನ್ನು

ಕಾಲಸೂಚಕಗಳಾದ ಸರ್ವಕರ್ಮಗಳಿಗು ಸರ್ವಸ್ವತಂತ್ರನಾದ ಮುಖ್ಯ ಕರ್ತೃವೂ ಆತನೇ ಆಗಿದ್ದಾನೆ ಎಂದು ತಿಳಿಯಬೇಕು.

“ ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।

ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೭–೭ ಗೀ

[ ನೂಲಿಗೆ ಮಣಿಯಂ ಪೋಣಿಸಿದ್ದಂತೆ ಈ ಸರ್ವಪ್ರಪಂಚದ ವ್ಯಾಪಾರ ನನ್ನನ್ನಾಶ್ರಯಿಸಿದೆ. ಇದೆಲ್ಲಕ್ಕೂ ನನ್ನಹೊರತು ಬೇರೆ ಒಂದು ಅಧಿಕವಾದ ಆಲಂಬನವು ಇಲ್ಲ. ಅರ್ಜುನನೇ ಕೇಳು ]

ಆದುದರಿಂದ ಅಖಂಡವಾಗಿರುವ ಆ ಕಾಲವನ್ನು ಹೀಗೆ ಗ್ರಹಿಸಬೇಕು — ಲೋಕದಲ್ಲಿ ಒಬ್ಬ ಮನುಷ್ಯಗೇ ದಾನಾದಿಕ್ರಿಯೆಗಳಂ ನಡೆಯಿಸುವಾಗ ದಾತಾರನು, ಜೇತಾರನು, ಕರ್ತೃ ಭೋಕ್ತೃ ಪಾಠಕ ಪಾಚಕ, ಅನುವಾದಕ ಉಪನ್ಯಾಸಕ, ಎಂದು ಆ ಕ್ರಿಯಾವಿಶೇಷನಿಮಿತ್ತದಿಂದ ನಾಮಾಂತರವುಂಟಾಗುವಂತೆ ಅಖಂಡವಾದ ಕಾಲಕ್ಕೆ ಸೂರ್ಯಗತ್ಯಾದಿನಿಮಿತ್ತದಿಂದ ಉದಯಕಾಲ ಉಚ್ಚಕಾಲ ಅಸ್ತಕಾಲ ಎಂಬುದಾದಿಯಾಗಿ ರೂಢವಾಗಿದೆಯೆಂದು ದಿಗ್ವಿಷಯದಲ್ಲಿ ಹೇಗೆ ಪೂರ್ವ ಅಪರ ಎಂಬುದೇ ಮೊದಲಾದ ಪರಿಮಾಣ ಸಂಯೋಗ ವಿಭಾಗಾದಿಗಳುಂಟೋ ಹಾಗೆ ಅವೆಲ್ಲವು ಈ ಕಾಲವಿಷಯದಲ್ಲಿಯೂ ಪೂರ್ವಕಾಲ ಪರಕಾಲ ಮಹಾಕಾಲ ಲವಕಾಲಾದಿ ಭೇದ ಉಂಟಾಗಿದೆಯೆಂದು; ತಿಳಿಯಬೇಕು. ಇನ್ನು ವಿಷಮಕಾಲ ಸಮಕಾಲಾದಿ ರೂಢಿಯು ನಮ್ಮನಮ್ಮ ಸುಖದುಃಖ ಸೂಚಕವಾದ ಕ್ರಿಯಾನಿಮಿತ್ತವು. ಕಾಲದಲ್ಲಿ ಯಾ ಗುರುತು ಕಂಡುಹಿಡಿಯತಕ್ಕ ವಿಕಾರವೊಂದೂ ಇಲ್ಲ. ಅದರಿಂದ ಕಾಲವು ಆತ್ಮಸ್ವರೂಪವು. ಸರ್ವನಿಮಿತ್ತಕಾರಣವು, ಸೂಕ್ಷ್ಮವು, ಅವ್ಯಕ್ತವು, ಆಗಿದೆ ಒಂದು ರೆಪ್ಪೆ ಇಕ್ಕುವುದೆಂಬಲ್ಲಿ ಕೂಡ ಈ ರೆಪ್ಪೆಯಂ ತೆರೆಯುವಿಕೆ ಮುಚ್ಚುವಿಕೆ, ತನ್ಮಧ್ಯಸ್ಥಿತಿ, ತದವಾಂತರ ಸೂಕ್ಷ್ಮವ್ಯಾಪಾರಗಳೆಷ್ಟೋ ಕರ್ಮವಾಯು ಕಾರ್ಯಗಳು ಊಹ್ಯಗಳಾಗಿವೆ.ಯೆಂದು ಭಾವಿಸಬೇಕು. ಇನ್ನು ಹೀಗೆ ಒಂದು ಅಕಾರೋಚ್ಚಾರಣವಾಗಬೇಕಾದರೆ ಕಾಲ್ವಾದಿಸ್ಥಾನಗಳಲ್ಲಿ ಬಾಹ್ಯಾಭ್ಯಂತರ ಪ್ರಯತ್ನಗಳು ಎಷ್ಟು ನಡೆಯಬೇಕೋ ವೈಯಾಕರಣರನ್ನು ವಿಚಾರಿಸಿರಿ.

---

with the great respects to
Mrs Annie Besant by the Author.

ಓಮ್ * ಧರ್ಮೇ ಸರ್ವಂಪ್ರತಿಷ್ಠಿತಂ ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ



Sanatanaryadharmaprasna Series No. 11



# A CATECHISM OF SANATANARYADHARMASARA.

## Part II DHARMA.

For Boys & Girls of Aryan Religion,

COMPILED BY

G. V. KRISHNACHARYA,

Author of "*Sadvritta Ratnávali*" etc.,

as directed by the

Members of 'Sadvritta' Association,

Bangalore.

AND PUBLISHED BY

G. K. THIMMANNACHARYA,

*IV Road, Chamrajpet, Bangalore.*

BANGALORE:

VOKKALIGARA SANGHA PRESS, 1909.

PRICE 1½ As] ]RE 1 PER DOZ

## ಸೂಚನೆ.

---

ನಿರತರದರು ಧರ್ಮಜ್ಞರು ಸನ್ಮಾರ್ಗಬೋಧಕರು ಆದ ಆರ್ಯಮಹಾಶಯರ ಸನ್ನಿಧಿಯಲ್ಲಿ ವಿಜ್ಞಾಪನೆ —

---

ನಮ್ಮ ಸನಾತನಾರ್ಯಧರ್ಮಗಳೆಲ್ಲವೂ ನಿತ್ಯಾಚರಣೀಯವಾದ ಕರ್ಮರೂಪವಾಗಿ ಉಭಯಲೋಕಸಾಧಕವೆನಿಸಿ ಯಜ್ಞ, ದಾನ, ತಪಸ್ಸು, ಈ ಮೂರರಲ್ಲಿಯೇ ಅಡಗಿದೆ. ಈ ತ್ರಿವಿಧ ಕರ್ಮವಲ್ಲದೆ ಬೇರೆ ಯಾವುದೂ ನಮಗೆ ವಿಹಿತವಾಗಿ ಇಲ್ಲ. ಈ ಮೂರುವಿಧ ಕರ್ಮಗಳಿಂದಲೇ ನಮಗೆ ಸರ್ವದುಃಖಗಳು ತೊಲಗಿ ಸರ್ವಸುಖಗಳು ದೊರೆಯಬೇಕಾಗಿರುವುದು. ಈ ತತ್ತ್ವಾಂಶವೇ ಮುಂದೆ ಆಯಾ ಪ್ರಶ್ನೆಗಳಲ್ಲಿ ಸ್ಪಷ್ಟಪಡಿಸಲ್ಪಟ್ಟಿದೆ. ಅದರಿಂದ ಇಹದ ಅಭ್ಯುದಯವನ್ನು, ಪರದ ನಿಃಶ್ರೇಯಸವನ್ನು, ಬಯಸುವವರೆಲ್ಲರೂ ಯಥಾಶಕ್ತಿ ಸ್ವಧರ್ಮವನ್ನು ನಡೆಯಿಸಿಕೊಂಡೇ ಬರಬೇಕೆಂದು ; ಒಂದು ವೇಳೆ ಅಹಂಕಾರಾಜ್ಞಾನಾಶ್ರದ್ಧಾಲಸ್ಯಾದಿಗಳಿಂದ ಆಚರಿಸದೆ ಬಿಟ್ಟರೆ ಅಂತಹವರು ಇಹಪರಗಳಲ್ಲಿ ಕೆಡುವರೆಂದು; ಸರ್ವಶಾಸ್ತ್ರಗಳು ಸಾರುತ್ತಿವೆಯಷ್ಟೆ !

ಆಧುನಿಕರಾದ ಆರ್ಯಕುಲಪುತ್ರರ ಚಿತ್ತವೃತ್ತಿಯಾದರೋ ಯಾವಕರ್ಮವನ್ನು ಮಾಡಬೇಕಾದರೂ, ಯಾವನೀತಿಧರ್ಮಗಳನ್ನು ನಡೆಯಿಸಬೇಕಾದರೂ, ಮೊತ್ತಮೊದಲಿಗೇ ಏತಕ್ಕೆ? ಎಂದು ಹೇತುವಿಚಾರದಲ್ಲಿಯೇ ಪ್ರವರ್ತಿಸುತ್ತಿದೆ. ಮುಖ್ಯವಾಗಿ ಎಲ್ಲಕ್ಕೂ ಆಮುಷ್ಮಿಕಫಲವೊಂದನ್ನೇ ಹೇಳಿದರೆ ಅವರ ಮನಸ್ಸು ಸ್ವಲ್ಪವೂ ತೃಪ್ತಿಪಡದು, ನಂಬದು, ಪ್ರವರ್ತಿಸದು. ಆದುದರಿಂದ “ಧಾವನಃ ಪ್ರೇತ್ಯ ಚೇಹ ಚ, ನಾಯಂಲೋಕೋಸ್ತ್ಯಯಜ್ಞಸ್ಯ, ಉಭೌಲೋಕಾವಭಿಜಯತಿ” ಎಂದು ದಾರಿ ತೋರಿಸಿರುವಂತೆ ಧರ್ಮವು ಉಭಯಲೋಕಸಾಧಕವೆಂಬ ತತ್ತ್ವಾಂಶವನ್ನು ಬಾಲಕರ ಮನಸ್ಸಿಗೆ ಬರುವಂತೆ ಮಾಡಲು ಈ ಕಾಲಾನುಗುಣವಾದ ಯುಕ್ತಿ, ಅನುಭವ, ಕಾರ್ಯಕಾರಣಭಾವಗಳನ್ನು ತೋರಿಸಬೇಕಾದುದು ಆವಶ್ಯಕವಾಯ್ತು. (ಪುಟ [illegible] ನೋಡಿರಿ.)

ಓಂ



# A Catechism of Sanatanarya Dharma II Part.

## ಸದ್ವೃತ್ತ ರತ್ನಾವಳಿಯ ಸನಾತನಾರ್ಯ ಧರ್ಮಸಾರದಲ್ಲಿ

## ಧರ್ಮಪ್ರಶ್ನೆ ೨ ನೆಯ ಭಾಗ.

---

ಅಂತೇವಾಸಿಯ (ಶಿಷ್ಯನ) ಅನುಯೋಗ (ಪ್ರಶ್ನೆ)—ಶ್ರುತಿಯೇ (೧) ಮುಖ್ಯ ಪ್ರಮಾಣವೆಂದಿರಷ್ಟೆ ? ಶ್ರುತಿಯೆಂದು ಹೆಸರು ಬರಲು ಕಾರಣ ವೇನು? ಅದೆಷ್ಟುವಿಧವಾಗಿದೆ ?

ಉಪಾಧ್ಯಾಯರ ಉತ್ತರ—(೧) ಶ್ರುತಿಯೆಂಬುದು ಬ್ರಹ್ಮನ ಮುಖದಿಂದ ಹೊರಗೆ ಕೇಳಬಂದುದರಿಂದ ಶ್ರುತಿಯೆನಿಸಿತು. ಅದು ಋುಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಎಂದು ನಾಲ್ಕು ತೆರನಾಗಿ ಸ್ವತಃಪ್ರಮಾಣವೆನಿಸಿದೆ. (ಸಹಜವಾಗಿ ಯಥಾರ್ಥವೆಂದು ನಂಬತಕ್ಕುದು) ಇದರಲ್ಲಿ ಮಾನವರ ಹೊಸಕಲ್ಪನೆಯೊ [illegible] ಇಲ್ಲವು.

ಅ—(೨) ಸ್ಮೃತಿ ಯೆಂ[illegible]ರೇನು?

ಉ—(೨) ಸ್ಮೃತಿ—ಆ [illegible]ದಗಳ ಅರ್ಥವನ್ನು ಮನ್ವಾದಿಗಳು ಸ್ಮರಿಸಿಕೊಂಡು ಮಾನವರಾದ ನಮ್ಮ [illegible] 'ೂ' ತಿಳಿವುದಕ್ಕೆ ಸುಲಭ ಶೈಲಿಯಿಂದ ಶ್ಲೋಕರೂಪವಾಗಿಯು ವಾಕ್ಯರೂಪವಾಗಿಯು ರಚಿಸಿದ ಧರ್ಮಸಂಹಿತೆ. ಇದು ಆ ವೇದಕ್ಕೆ ಎರಡನೆಯ ಪ್ರಮಾಣವು. ಇದರಂತೆಯೇ ಈ ಶ್ರುತಿಸ್ಮೃತಿಗಳ ಅರ್ಥವನ್ನನುಸರಿಸಿ ವೇದಾಧಿಕಾರವಿಲ್ಲದ, ಜಾತಿ ಮಾತ್ರವಿದ್ದು ಸತ್ಕರ್ಮವಿಲ್ಲದ, ಬ್ರಹ್ಮಬಂಧುಗಳಿಗಾಗಿಯೂ ; ಸ್ತ್ರೀ ಶೂದ್ರಾದಿಗಳಿಗೋಸ್ಕರವೂ; ಚರಿತ್ರರೂಪ

ವಾಗಿ ಪರಾಶರ ವೇದವ್ಯಾಸಾದಿಗಳು ಹೇಳಿರುವ ಪುರಾಣ ಇತಿಹಾಸ ಆಗಮ ಕಾವ್ಯಗಳೂ ಆ ಸ್ಮೃತಿಗೆ ಎರಡನೆಯ ಪ್ರಮಾಣಗಳೆನಿಸಿಕೊಂಡು ಧರ್ಮತತ್ವ ಬೋಧಕಗಳಾಗಿವೆ.

ಅ—(೩) ಸದಾಚಾರವೆಂದರೇನು?

ಉ—(೩) ಸದಾಚಾರವೆಂದರೆ ಶಿಷ್ಟಾಚಾರವು. ಶಿಷ್ಟರು = ಕರ್ಮಯೋಗಿಗಳಾದ ಅಹಂಕಾರಮತ್ಸರಾದಿ ದುರ್ಗುಣಗಳಿಲ್ಲದ ತಪಸ್ವಿಗಳು. ಇವರು ಆಚರಿಸುತ್ತ ಬಂದ ಯಜ್ಞದಾನತಪೋರೂಪವಾದ ನಿತ್ಯಕರ್ಮವು ಮತ್ತು ದಯಾದಾಕ್ಷಿಣ್ಯವಿನಯಾದಿ ಸನ್ಮಾರ್ಗಪ್ರವರ್ತನವು ಸದಾಚಾರವೆನಿಸಿದೆ.

ಅ—(೪) ಆತ್ಮಸಂತೋಷವೆಂಬುದಾವುದು?

ಉ—(೪) ಆತ್ಮಸಂತುಷ್ಟಿ. ಎರಡು ಮೂರು ವಿಧವಾಗಿ ವಿಧಿಸಲ್ಪಟ್ಟ ಕರ್ಮವಿಷಯದಲ್ಲಿ ಮನಃಪ್ರೀತಿಯಿಂದ ಆವುದೊಂದನ್ನಾದರೂ ನಡೆಯಿಸುವುದು. ಉದಾ—೮ ರಿಂದ ೧೬ ವರ್ಷದವರೆಗೂ ಉಪನಯನಕಾಲವೆಂದಿರುವಾಗ ಕುಮಾರನ ಮನೋದೇಹವರ್ತನಾನುಗುಣವಾಗಿ ತನಗೆ ಔಚಿತ್ಯವು ಅನುಕೂಲ್ಯವೂ ತೋರಬಂದಂತೆ ನಡೆಯಿಸುವುದು.

ಅ—(೫) ಇನ್ನು ಸತ್ಸಂಕಲ್ಪಜವೆಂಬ ಕಾಮ ವಾವುದು ?

ಉ—(೫) ಶಾಸ್ತ್ರವಿರೋಧವಿಲ್ಲದ ಕಾಮವು. ಭೋಜನಕಾಲ ಹೊರತು ಬೇರೆ ಕಾಲದಲ್ಲಿ ಜಲಪಾನವನ್ನು ಮಾಡುವುದಿಲ್ಲವೆಂದಾಗಲಿ; ಈ ವ್ರತದಲ್ಲಿ ಲವಣವನ್ನು ವರ್ಜಿಸುವೆನೆಂದಾಗಲಿ ; ಈ ದಿವಸದಲ್ಲಿ ಮೌನದಿಂದಿರುವೆನೆಂದಾಗಲಿ; ಸಂಕಲ್ಪಿಸಿಕೊಂಡು ಆ ಪ್ರಕಾರವೇ ನಡೆಯಿಸುವುದು.

ಶ್ಲೋ ॥ ಸಂಕಲ್ಪಮೂಲಃ ಕಾಮೋವೈಯಜ್ಞಾಃ ಸಂಕಲ್ಪಸಂಭವಾಃ ।
ವ್ರತಾನಿ ಯಮಧರ್ಮಾಶ್ಚ ಸರ್ವೇಸಂಕಲ್ಪಜಾಃ ಸ್ಮೃತಾಃ ॥೩—೨॥

(“ ನಾನು ಹೀಗಿರಬೇಕು, ಹೀಗೆ ಮಾಡಬೇಕು ” ಎಂಬ ಬುದ್ಧಿಯಿಂದುಂಟಾಗುವ ಬಯಕೆಯೇ ಕಾಮವು. ಯಜ್ಞಾದಿಕರ್ಮಗಳು, ಉಪವಾಸಾದಿವ್ರತಗಳು, ಯಮನಿಯಮ ಮುಂತಾದ ಸರ್ವಧರ್ಮಗಳು, ಎಲ್ಲವು ಮನದಲ್ಲಿ ಉಂಟಾಗುವ ಆ ಕಾಮದಿಂದಲೇ ಹುಟ್ಟುವುವೆಂದು ಹೇಳಲ್ಪಟ್ಟಿದೆ.”)

ಅ—ಇವೆಲ್ಲಾ ಸರಿಯೇ. 'ಶಿಷ್ಟರ ಆಚಾರ' ಎಂಬಲ್ಲಿ ಆ ಶಿಷ್ಟರ ಮುಖ್ಯವಾದ ಲಕ್ಷಣವೇನೋ ತಿಳಿಯಲಿಲ್ಲವಲ್ಲ ?

ಉ—ಅಹಂಕಾರ ಅಸೂಯೆ ಮಾತ್ಸರ್ಯ, ದಂಭ, ಲೋಭ, ಕ್ರೋಧ, ಮೋಹ, ಮದ ಮುಂತಾದ ದುರ್ಗುಣಗಳೊಂದೂ ಇಲ್ಲದ ಶಾಂತಾತ್ಮರು, ಸುಶಿಕ್ಷಿತರು,ಸ್ವಧರ್ಮನಿರತರು, ಎನಿಸಿಕೊಂಡು ಯಾವಾಗಲು ಮನಸ್ಸಂತೋಷಯುಕ್ತರಾಗಿ ಅಧ್ಯಾತ್ಮವಿದ್ಯಾಸಕ್ತರಾದ ತಪೋಜ್ಞಾನವಯೋವೃದ್ಧರು.

ಅ—ಇವರು ಇಂತಹವರು ಎಂದು ನಾವು ತಿಳಿಯುವುದು ಹೇಗೆ ?

ಉ—ಅವರ ನಿತ್ಯಾಹ್ನಿಕ ಚರ್ಯೆಗಳಿಂದಲೂ ಶಮ ದಮ ದಯಾ ದಾಕ್ಷಿಣ್ಯ ದಾನಾದಿಗುಣಗಳಿಂದಲೂ ತಿಳಿಯಬೇಕು.

ಅ—ಈ ಕಾಲದಲ್ಲಿ ಯೆಲ್ಲರೂ ಬಹಿರಂಗದಲ್ಲಿ ಶಿಷ್ಟರೆನಿಸಿಕೊಂಡೇ ಇರುವರು. ಅವರ ಅಂತರಂಗವು ನಮಗೇನು ಗೊತ್ತುಂಟು ?

ಉ—ಆಗಂತುಕರಲ್ಲಿ ತಿಳಿಯಲಾಗದಿದ್ದರೂ ಚಿರಕಾಲ ಒಂದುಕಡೆಯಲ್ಲಿರುವಾಗ ನಡೆ ನುಡಿ ನೋಟ ಮುಖಭಾವ ಆಕಾರಗಳ ಇಂಗಿತಗಳಿಂದಲೂ, ಆಹಾರವಿಹಾರಾದಿಗಳಿಂದಲೂ, ಪ್ರತ್ಯಕ್ಷಪರೋಕ್ಷಚರ್ಯೆಗಳಿಂದಲೂ, ಲೋಕದಲ್ಲಿ ಶೀಲಸ್ವಭಾವಗಳು ತಿಳಿಯಬರುತ್ತಿವೆ. ಆದರೆ ನಮಗೆ ಅವರಲ್ಲಿರುವ ಸಂಪ್ರದಾಯಾಗತವಾದ ಆಚಾರವೇ ಮುಖ್ಯವಲ್ಲವೆ ?

ಅ—ಆ ಶಿಷ್ಟರ ಆಚಾರಗಳು ಚರ್ಯೆಗಳೆಂಬುವು ಆವಾವುವು ?

ಉ—ಉಷಃ ಕಾಲೋತ್ಥಾನ ಗುರುವಂದನ ಶೌಚಸ್ನಾನಾದಿಗಳು ಬಹುವಾಗಿವೆ. ಅವನ್ನು ಸುಮ್ಮನೆ ಕೇಳಿದಮಾತ್ರಕ್ಕೇನೂ ಫಲವಿಲ್ಲ. ಅವು ಸರ್ವರಿಂದಲೂ ಸದಾನುಷ್ಠೇಯಗಳಾದುದರಿಂದ ಅವೆಲ್ಲವನ್ನೂ ಸಂಗ್ರಹಿಸಿ "ಸದ್ವೃತ್ತರತ್ನಾವಳಿ" ಎಂಬ ಗ್ರಂಥದಲ್ಲಿ ಸದಾಚಾರಸರವೆಂಬ ಭಾಗದಲ್ಲಿ "ದೀರ್ಘಾಯುಸ್ಸೂತ್ರ" ಎಂದು (೩೦೦ ಸೂ) ತೋರಿಸಲ್ಪಟ್ಟಿವೆ. ತೆಗೆದು ನೋಡಿದರೆಲ್ಲವು ತಿಳಿಯಬರುವುದು.

ಅ—ಆಗಲಿ. ಅದನ್ನಾಮೇಲೆ ನೋಡುವ. ಆ ಸದಾಚಾರಗಳನ್ನು ನಡೆಯಿಸುತ್ತಿದ್ದ ನಮ್ಮ ಆರ್ಯರು ಹೀಗಿದ್ದರೆಂದು ಗುರುತು ಕಂಡುಕೊಳ್ಳಲು ಹೊರಗೆ ತೋರಿಬರುವ ಮುಖ್ಯವಾದ ಲಕ್ಷಣಗಳೇನಾದರೂ ವುಂಟೊ ?

ಉ– ಉಂಟು. ನೀವು ಕೋಪಿಸಿಕೊಂಡರೆ ನಿಮ್ಮನ್ನು ಅವರು ಅನುಸರಿಸುವರಲ್ಲದೆ ಪ್ರತಿಯಾಗಿ ಕೋಪಿಸರು. ನೀವು ದೂಷಿಸಿದರೆ ಬಯ್ದರೆ ಅವರು ದೂಷಿಸರು, ಬಯ್ಯರು. ಕಡೆಗೆ ನಿಷ್ಠುರವಾದ ಮಾತನ್ನೇ ಆಡರು. ಎಲ್ಲಾ ಪ್ರಾಣಿಗಳಿಗೂ ನೆಂಟರಂತೆ ಇರುವರು. ಪರಾರ್ಥವಾಗಿ ತಮ್ಮ ದೇಹವನ್ನಾದರೂ ತೆತ್ತುಬಿಡುವರು; ತಮಗೆ ಅಪಕಾರವಮಾಡುವ ಶತ್ರುವಿನಲ್ಲಿಯು ಉಪಕಾರವನ್ನೆಣಿಸುವ ಸ್ವಭಾವದವರಾಗಿರುವರು. ಪರರಿಗೆ ಪ್ರಾಪ್ತವಾದ ಭಯಶೋಕಾದಿಗಳನ್ನು ಸಾಧ್ಯವಾದಷ್ಟು ಪರಿಹರಿಸುವರು. ತಾವು ಮಾತ್ರ ಭಯಪಡರು, ಶೋಕಿಸರು, ತಮಗೆ ಎಷ್ಟು ಕಷ್ಟಗಳು ಬಂದರೂ ತಮ್ಮ ಜಾತಿ, ಮತ, ಕುಲ, ವರ್ಣಾಶ್ರಮಧರ್ಮಗಳನ್ನು ಎಂದಿಗೂ ಬಿಡರು. ಮುಖ್ಯವಾಗಿ ಆಪತ್ತುಬಂದಾಗ ತಗ್ಗರು. ಸಂಪತ್ತುಬಂದಾಗ ಹಿಗ್ಗರು. ಸರ್ವಭೂತಸಮರು. ಇಂದ್ರಿಯವಿಷಯಗಳಿಗೆ ವಶರಾಗದೆ ಆ ಯಿಂದ್ರಿಯಗಳನ್ನು ತಮ್ಮ ವಶದಲ್ಲಿರಿಸಿಕೊಂಡಿರುವರು. ತ್ರಿಕರಣಕಾರ್ಯಗಳಲ್ಲಿಯೂ ಏಕರೂಪರಾಗಿರುವುದರಿಂದ ಸತ್ಯಧರ್ಮರಕ್ಷಣದಲ್ಲಿಯೇ ಸದಾ ನಿರತರಾಗಿರುವರು. ಶಮದಮಾದಿ ಸಾತ್ವಿಕ ಸಂತೋಷಸ್ವಭಾವದವರಾದುದರಿಂದ ಜ್ಞಾನಭಕ್ತಿವೈರಾಗ್ಯಭಾಗ್ಯವಂತರೆಂದು ಪ್ರಸಿದ್ಧಿಗೆ ಬಂದು; ಎಲ್ಲಿದ್ದರೂ ಅವರು ಹೇಗಿದ್ದರೂ ತಮ್ಮ ಯಮನಿಯಮ ಯಜ್ಞ ದಾನ ತಪೋರೂಪ ನಿತ್ಯಕರ್ಮಾನುಷ್ಠಾನದಲ್ಲಿಯೇ ನಿತ್ಯಾಸಕ್ತರು ಎಂದು ಲೋಕಪ್ರಸಿದ್ಧರಾಗಿರುತ್ತಾರೆ. ಅವರೇ ಧರ್ಮಾತ್ಮರು, ಮಹಾನುಭಾವರು.

ಅ–ಈಗ ಇಂತಹವರನ್ನೆಲ್ಲಿ ತರಬೇಕು ?

ಉ–ಎಲ್ಲಿಯಾದರೂ ತರಬೇಕೆ ? ಮಹಾತ್ಮರು ಎಷ್ಟೋಮಂದಿ ಇದ್ದಾರೆ. ಅಷ್ಟೇಕೆ.? ಪ್ರತ್ಯಕ್ಷದಲ್ಲಿಯೇ ಇದ್ದಾರಲ್ಲವೆ ? ಪ್ರಾಯಿಕವಾಗಿ ಯತಿಗಳು ಚತುರ್ಥಾಶ್ರಮಿಗಳೆಲ್ಲರೂ ತಪಸ್ವಿಗಳೇ ಅಲ್ಲವೆ ?

ಅ–ಸರಿ. ಒಳ್ಳೆಯ ತಪಸ್ವಿಗಳು ! ಶಿಷ್ಯರ ಧರ್ಮಕರ್ಮದ ಯೋಗಕ್ಷೇಮವೇ ಇಲ್ಲದೆ ತಿಂಗಳ ಸಂಬಳವನ್ನು ಮಾತ್ರವೇ ಸಾಧಿಸುವರು. ಧನಸಂಪಾದನಾರ್ಥವಾದ ಆಶ್ರಮ–ತಪಸ್ಸು—ಅದು.

ಉ—ಹಾ !! ಹಾಗೆನ್ನಬಾರದು. ಅವರು ವಿರಕ್ತರು ನಿಃಸ್ಪೃಹರು. ಆ ಧನವನ್ನು ಕೈಯಿಂದ ಕೂಡ ತಾಕರು. ಅವರನ್ನಾಶ್ರಯಿಸಿರುವ ಪರಿವಾರದ ಕಾರ್ಯವದು. ಅವರೂ ಅದೂ (ಆ ಧನಾರ್ಜನವೂ) ಪರಹಿತಾರ್ಥವಲ್ಲದೆ ಸ್ವಾರ್ಥವಲ್ಲ. ಅರಸು ನಮ್ಮಿಂದ ಕಂದಾಯವನ್ನು ಕೊಳ್ಳುವುದು ದೇಶದ ಪ್ರಜಾಹಿತಕ್ಕಲ್ಲವೆ? ಸೂರ್ಯನು ತನ್ನ ರಶ್ಮಿಗಳಿಂದ ನೆಲವನ್ನು ತಪಿಸುತ್ತ ಜಲಾಂಶವನ್ನು ಗ್ರಹಿಸುವುದು ಮರಳಿಯೂ ಈ ನೆಲಕ್ಕೆ ಸಹಸ್ರಗುಣವಾಗಿ ವರ್ಷಿಸುವುದಕ್ಕೇ ಅಲ್ಲವೆ? ಅದರಿಂದ ಗುರುಪೀಠದ ಯತಿಗಳೇ ಆಗಲಿ, ಇತರ ಯತಿಗಳೇ ಆಗಲಿ, ಇರುವಕಡೆ ಎಲ್ಲಿಯೆಲ್ಲಿಯೂ ತಪ್ಪದೆ ನಿತ್ಯ ದೇವತಾರಾಧನೆ, ನಿತ್ಯ ಬ್ರಾಹ್ಮಣಸಂತರ್ಪಣೆ, ನಿತ್ಯ ದಾನಯಜ್ಞಾದಿಗಳು, ಸಚ್ಛಾಸ್ತ್ರಪ್ರವಚನ, ಶಿಷ್ಯಶಿಕ್ಷಣಾದಿಗಳು, ನಡೆಯುತ್ತಲೇ ಇರುವುದು ಪ್ರತ್ಯಕ್ಷವಾಗಿಯೆ ಇದೆಯಲ್ಲವೆ? ಲಕ್ಷ್ಯವಿಟ್ಟು ನೋಡಿರಿ.

ಅ—ಆಗಲಿ. ಅದೇ ಬೇರೆ ವಿಷಯವು. ಪ್ರಕೃತ ನಾವು ಕಲಿಯಬೇಕಾಗಿರುವ ಆರ್ಯಧರ್ಮಗಳು ಎಷ್ಟು ಬಗೆಯಾಗಿವೆ? ಎಂಬುದನ್ನು ಮೊದಲು ತಿಳಿಸಬೇಕು ಅದು ತಿಳಿದ ಬಳಿಕ ಮಿಕ್ಕ ವಿಚಾರ ಮಾಡುವ.

ಉ—ಮೊದಲೇ ಹೇಳಿದೆನಷ್ಟೆ? "ಶಿಷ್ಟರು ಆಚರಿಸುತ್ತಿರುವುದೆಲ್ಲವೂ ಧರ್ಮವೆಂದು"

ಅ—ಅವು ಸದಾಚಾರಗಳು "ಸದ್ವೃತ್ತರತ್ನಾವಳಿ" ಎಂಬ ಗ್ರಂಥದಲ್ಲಿ ಹೇಳಿದೆ ಯೆಂದಪ್ಪಣೆಯಾಯ್ತು. ಅದು ಸರಿಯೆ. ನಮ್ಮ ಸನಾತನಧರ್ಮಗಳೆಲ್ಲವು ಎಷ್ಟು ವಿಧಗಳಾಗಿವೆ? ಎಂದೀಗ ಜಿಜ್ಞಾಸೆ ಹುಟ್ಟಿದೆ.

ಉ—ಆ ಧರ್ಮಗಳು ಅನಂತಾನಂತಗಳಾಗಿರುವುದರಿಂದ ಇಷ್ಟೆಂದು ಎಣಿಸಲು ಅಶಕ್ಯವು. ಅದರಿಂದ ಸಾಮಾನ್ಯಧರ್ಮ, ವಿಶೇಷಧರ್ಮ ಎಂದು ಎರಡು ಭಾಗವಾಗಿ ಗ್ರಹಿಸಿದರೆ ಸಾಕೆಂದು ತೋರುವುದು.

ಅ—ಆ ಸಾಮಾನ್ಯಧರ್ಮವಾವುದು?

ಉ—ಮನುಸ್ಮೃತಿಯಲ್ಲಿ ಹೇಳಿದೆ. ನೋಡಿರಿ.

ಶ್ಲೋ॥ ಧೃತಿಃ ಕ್ಷಮಾ ದಮೋ ಸ್ತೇಯಂ ಶೌಚ ಮಿನ್ದ್ರಿಯನಿಗ್ರಹಃ ॥
ಧೀ ರ್ವಿದ್ಯಾ ಸತ್ಯ ಮಕ್ರೋಧೋ ದಶಕಂ ಧರ್ಮಲಕ್ಷಣಂ॥೬-೯೨॥

೧ ಧೃತಿ = ಸಂಪದಾಪತ್ತುಗಳಲ್ಲಿ ಚಿತ್ತವು ಚಲಿಸದಂತೆ ತಡೆದುಕೊಂಡು ಸದಾ ಸಂತೋಷದಿಂದಿರುವುದು.

೨ ಕ್ಷಮೆ = ಪರರು ಅಪಕಾರ ಮಾಡಿದರು ಅದನ್ನೆಣಿಸದೆಯೇ ಅವರಿಗೆ ತಾನು ಪ್ರತ್ಯುಪಕಾರವನ್ನೇ ಮಾಡುವುದು. ಎಂದರೆ ಮನೋವಿಕಾರಕ್ಕೆ ಹೇತುವಿದ್ದರೂ ವ್ಯಾಕುಲನಾಗದಿರುವುದು.

೩. ದಮ = ಮನೋಗತವಾದ ಮದ ಮತ್ಸರ ಅಹಂಕಾರಾದಿಗಳನ್ನು ಬಿಟ್ಟು ಮನಸ್ಸನ್ನು ಶಿಕ್ಷಿಸುವುದು.

೪. ಅಸ್ತೇಯ = ಅನ್ಯಾಯದಿಂದ ಪರಧನವನ್ನು ತ್ರಿಕರಣಗಳಿಂದಲೂ ಅಪೇಕ್ಷಿಸದೆ ತೆಗೆದುಕೊಳ್ಳದೆಯೆ ಇರುವುದು.

೫. ಶೌಚ = ಮನೋದೇಹಗಳ ನೈರ್ಮಲ್ಯ—ಮನದ ಅಸೂಯಾದಿಮಲಗಳನ್ನು ಜ್ಞಾನದಿಂದಲು, ದೇಹದ ಸ್ವೇದಾದಿಗಳನ್ನು ಮೃಜ್ಜಲಾದಿಗಳಿಂದಲು, ಆಗಾಗಲೆ ಕಳೆಯುತ್ತ ಬರುವುದು. ಮತ್ತು ಪಾರಿಶುದ್ಧ್ಯ—ಮನೆ ವಸ್ತ್ರ ಪಾತ್ರಾದಿಗಳ ಕೊಳೆಯನ್ನು ಕಳೆಯುವುದು.

೬. ಇಂದ್ರಿಯನಿಗ್ರಹ—ರೂಪಾದಿವಿಷಯಗಳಲ್ಲಿ ಚಕ್ಷುರಾದೀಂದ್ರಿಯಗಳನ್ನು ಅತ್ಯಾಸಕ್ತವಾಗದಂತೆ ತಡೆದು ತಡೆದು ವಶದಲ್ಲಿರಿಸಿಕೊಳ್ಳುವುದು ; ಇದಕ್ಕೆ ಬ್ರಹ್ಮಚರ್ಯವೆಂಬ ಹೆಸರು ಉಂಟು.

೭. ಧೀ = ಶಾಸ್ತ್ರತತ್ತ್ವವಿವೇಚನೆ, ಯುಕ್ತಾಯುಕ್ತ, ಹಿತಾಹಿತ ವಿವೇಕವು.

೮. ವಿದ್ಯೆ = ಬ್ರಹ್ಮವಿದ್ಯೆ, ಆತ್ಮತತ್ತ್ವಜ್ಞಾನವು.

೯. ಸತ್ಯ = ಯಥಾರ್ಥವಾದ ಪ್ರಿಯವಚನವು.

೧೦. ಅಕ್ರೋಧ = ಕೋಪಕಾರಣವಿದ್ದರೂ ಕೋಪಿಸಿಕೊಳ್ಳದಿರುವುದು.

ಶ್ಲೋ॥ "ಸತ್ಯಮಸ್ತೇಯ ಮಕ್ರೋಧೋ ಹ್ರೀಃ ಶೌಚಂ ಧೀರ್ಧೃತಿರ್ದಮಃ।
ಸಂಯತೇಂದ್ರಿಯತಾ ವಿದ್ಯಾ ಧರ್ಮಃ ಸರ್ವ ಉದಾಹೃತಃ ॥೬೬॥"

ಹೀಗೆ ಯಾಜ್ಞವಲ್ಕ್ಯಸ್ಮೃತಿಪ್ರಾಯಶ್ಚಿತ್ತಕಾಂಡದಲ್ಲಿ ಕ್ಷಮೆಗೆ ಬದಲು "ಹ್ರೀ = ನಾಚಿಕೆ" ಎಂದಿದೆ. ಆದರಿಂದ ಅಕಾರ್ಯದಲ್ಲಿ ನಾಚಿಕೊಳ್ಳುವುದು ಕೂಡ ಧರ್ಮವೆಂದು ಗ್ರಹಿಸಬೇಕು.

ಈ ಹತ್ತು ಧರ್ಮಗಳು ಸರ್ವಸಾಮಾನ್ಯಗಳು ; ಇದಿಷ್ಟನ್ನೂ ನಡೆಯಿಸಲಾರದವನು ಇವರಲ್ಲಿ ೫ ಅಯ್ದನ್ನಾದರೂ ತಪ್ಪದೆ ಎಲ್ಲರೂ ಆಚರಿಸಬೇಕೆಂದು ಮನ್ವಾದಿಸ್ಮೃತಿಗಳು ಸಾರುತ್ತಿವೆ :—

• ಶ್ಲೋ ॥ " ಅಹಿಂಸಾ ಸತ್ಯಮಸ್ತೇಯಂ ಶೌಚಮಿನ್ದ್ರಿಯನಿಗ್ರಹಃ ॥
ಏತಂ ಸಾಮಾಸಿಕಂ ಧರ್ಮಂ ಚಾತುರ್ವರ್ಣ್ಯೇಽಬ್ರವೀನ್ಮನುಃ, " ।೧೦—೬೩।

" ಅಹಿಂಸೆ = ತನಗೆ ಪ್ರತಿಕೂಲ, ಕೊಂದರೆ, ಅಹಿತ, ನೋವು, ಆಗುವುದೆಲ್ಲವೂ ಪರಪ್ರಾಣಿಗೂ ಆಗುವುದೆಂಬ ಭಾವದಿಂದ ಯಾರಿಗೂ ತನ್ನ ಕೃತ್ಯದಿಂದ (ಬಾಧೆ) ಹಿಂಸೆಯಾಗದಂತೆ ನಡೆದುಕೊಳ್ಳುವುದು.

ಸತ್ಯ = ದಿಟವಾಗಿಯು ಹಿತವಾಗಿಯು ಮಿತವಾಗಿಯು ನುಡಿವುದು.

ಅಸ್ತೇಯ = ಪರರ ವಸ್ತುವೊಂದನ್ನೂ ಅವರ ಅನುಮತಿಯಿಲ್ಲದೆ ತೆಗೆದುಕೊಳ್ಳದಿರುವುದು. ಮನದಿಂದಲೂ ಬಯಸದಿರುವುದು.

ಶೌಚ = ಮಣ್ಣುನೀರುಗಳಿಂದ ದೇಹ ಗೇಹ ವಸ್ತ್ರಾದಿ ಶುದ್ಧಿ, ಶಾಸ್ತ್ರಜ್ಞಾನದಿಂದ ಮನಶ್ಶುದ್ಧಿಯುಂಟುಮಾಡಿಕೊಳ್ಳುತ್ತಿರುವುದು.

ಇಂದ್ರಿಯ ನಿಗ್ರಹ = ಆಹಾರವಿಹಾರಾದಿಗಳಲ್ಲಿ ಅತಿಪ್ರಸಕ್ತಿಬಿಟ್ಟು ಮಿತವಾಗಿ ವಿಷಯಗಳನ್ನು (ರೂಪರಸಗಂಧಸ್ಪರ್ಶಶಬ್ದ) ಉಪಯೋಗಿಸಿಕೊಳ್ಳುತ್ತ ಮನಸ್ಸನ್ನು ಚಂಚಲವಾಗಿಸಿಕೊಳ್ಳದೆ ಸ್ಥಿರಪಡಿಸಿಕೊಳ್ಳುವುದು."

ಅ—ಸರಿ. ಇನ್ನು ವಿಶೇಷ ಧರ್ಮಗಳಾವುವು ?

ಉ—ತ್ರೈವರ್ಣಿಕರು ನಡೆಯಿಸುವ ಯಮನಿಯಮಾದಿಗಳು, ವರ್ಣಾಶ್ರಮಾದಿಧರ್ಮಗಳು.

ಅ—ತ್ರೈವರ್ಣಿಕರು ಯಾರು ? ಯಮನಿಯಮಗಳೆಂದರೇನು ?

ಉ—ಬ್ರಾಹ್ಮಣ ಕ್ಷತ್ರಿಯ ವೈಶ್ಯ ಎಂಬ ಕುಲದವರು (ತ್ರೈವರ್ಣಿಕರು). ಇವರು ತಮ್ಮ ತಮ್ಮ " ತಪಃ ಸ್ವಧರ್ಮವರ್ತಿತ್ವಂ " ಎಂಬ ತಪಸ್ಸಾಧನೆಗೆ ದೇಹೇಂದ್ರಿಯ ಪ್ರಾಣ ಮನಸ್ಸುಗಳು ಅನುಕೂಲವಾಗಿರುವಂತೆ ಇಂದ್ರಿಯಮನೋವೇಗಗಳನ್ನು ತಡೆದುಕೊಂಡು ಯಾವಜ್ಜೀವವು ಆಸ್ವಧರ್ಮವನ್ನೇ ಸುಖದಿಂದ ಸಾಧಿಸುತ್ತ ಬರುವ ಧರ್ಮವು ಯಮವು ;

ನಿಯಮವೆಂದರೆ ವ್ರತವು. ತನ್ನ ಇಚ್ಛೆಯಿಂದ ಈ ದಿನದಲ್ಲಿ ಇದು ಮಾಡತಕ್ಕದು, ಇದು ಬಿಡತಕ್ಕದು ಎಂದು ಸಂಕಲ್ಪಿಸಿಕೊಂಡು, ಪ್ರತಿಜ್ಞಾಪುರಸ್ಸರವಾಗಿ ನಿತ್ಯವೂ ಆ ಪ್ರಕಾರವೇ ಮಾಡುವ ಜಪೋಪವಾಸಾಧ್ಯಯನಾದಿ ಶಾಸ್ತ್ರವಿಹಿತವಾದಂತಹ ಕರ್ಮವು ನಿಯಮವೆನಿಸಿದೆ.

---

“ ಶರೀರಸಾಧನಾಪೇಕ್ಷಂ ನಿತ್ಯಂ ಯತ್ಕರ್ಮ ತದ್ಯಮಃ ||

ನಿಯಮಸ್ತು ಸ ಯತ್ಕರ್ಮ ನಿತ್ಯಮಾಗನ್ತುಸಾಧನಮ್ ” ಎಂದು ಅಮರ ೨ನೆಯ ಕಾಂಡದ ಬ್ರಹ್ಮವರ್ಗದಲ್ಲಿ ಹೇಳಿದೆ ನೋಡಿರಿ.

ಅ—ಆ ಯಮ ನಿಯಮಗಳು ಇಷ್ಟೆಂದೇನಾದರೂ ಪರಿಗಣನೆಯುಂಟೋ? ಎಷ್ಟಾದರೆ ಅಷ್ಟೇನೋ ?

ಉ—ಅಲ್ಲ. ಪರಿಗಣನೆ ಉಂಟು. ಕೇಳಿರಿ. ಯಾಜ್ಞ್ಯವಲ್ಕ್ಯ ಸ್ಮೃತಿಯಲ್ಲಿ—ಬ್ರಹ್ಮಚರ್ಯ (ಇಂದ್ರಿಯನಿಗ್ರಹ), ದಯೆ, ಕ್ಷಮೆ, ಧ್ಯಾನ, ಸತ್ಯ, ಅದಂಭ, ಅಹಿಂಸೆ, ಅಸ್ತೇಯ, ಇಷ್ಟುರವಾಗಿ ನುಡಿಯದಿರುವುದು, ದಮ, ಈ ಹತ್ತು ಯಮಗಳೆಂದು; ಸ್ನಾನ, ಮೌನ, ಉಪವಾಸ, ಪೂಜೆ, ಅಧ್ಯಯನ, ಪುಂಸ್ತ್ರೀಸಂಬಂಧವಿಲ್ಲದಿರುವುದು, ಗುರುಶುಶ್ರೂಷೆ, ಶೌಚ, ಕೋಪವಿಲ್ಲದಿರುವುದು, ಕಾರ್ಯಗಳಲ್ಲಿ ಪ್ರಮಾದವೊದಗದಂತೆ ಯಾವಾಗಲೂ ಎಚ್ಚರದಿಂದಿರುವುದು, ಈ ಹತ್ತು ನಿಯಮಗಳೆಂದು, ಹೇಳಲ್ಪಟ್ಟಿವೆ. ಸದ್ವೃತ್ತಾನುಷ್ಠಾನ ೪೨ ನೆಯ ಪುಟ ನೋಡಿರಿ.

ಈ ಹತ್ತು ಯಮ ನಿಯಮಗಳನ್ನು ನಡೆಯಿಸಲಾರದವನು ಅವರಲ್ಲಿ ಅರ್ಧವನ್ನಾದರೂ ಆಚರಿಸಲೇಬೇಕೆಂದು ಪಾತಂಜಲಯೋಗಸೂತ್ರದಲ್ಲಿ ಸಂಗ್ರಹಿಸಲ್ಪಟ್ಟಿದೆ. “ ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾಪರಿಗ್ರಹಾ ಯಮಾಃ || ೨—೩೦; ಶೌಚಸಂತೋಷತಪಸ್ಸ್ವಾಧ್ಯಾಯೇಶ್ವರಪ್ರಣಿಧಾನಾನಿ ನಿಯಮಾಃ ||೨—೩೨|| ” (ಅಪರಿಗ್ರಹ = ಭೋಗ್ಯವಸ್ತುಗಳನ್ನು ತೆಗೆದುಕೊಳ್ಳದೆ, ಆಶಿಸದೆ, ಇರುವುದು )

ಇವೆಲ್ಲವು ಸಾಧಾರಣವಾಗಿ ಆ ಸಾಮಾನ್ಯಧರ್ಮಗಳಲ್ಲಿಯೇ ಅಡಗಿವೆ; ಆದರೆ ತ್ರೈವರ್ಣಿಕರಿಗೆ ಚಿತ್ತನೈರ್ಮಲ್ಯಾರ್ಥವಾಗಿ ಇಂದ್ರಿಯನಿಗ್ರಹಕ್ಕೂ

ಶಮದಮಾದಿಗುಣಗಳನ್ನು ಹೆಚ್ಚಿಸಿಕೊಳ್ಳುವುದಕ್ಕೂ, ನಿತ್ಯಕೃತ್ಯವಾಗಿರುವುದರಿಂದ ಸ್ತ್ರೀಶೂದ್ರಾದಿಗಳಿಗಿಂತಲೂ ವಿಶೇಷವೆಂದು ತಾತ್ಪರ್ಯವು.

ಅ—ಆ ವಿಶೇಷಧರ್ಮಗಳಿಷ್ಟೆನೋ ಇನ್ನೂ ಬೇರೆ ಇವೆಯೊ ?

ಉ—ಅಪರಿಮಿತಗಳಾಗಿವೆ. ಅವೆಲ್ಲವನ್ನು ಹೇಳಲು ಸಾಧ್ಯವೆ ?

ಅ—ಅವರಲ್ಲಿ ಜಾತಿಗೊಂದರ ಮೇರೆ ಕೆಲವನ್ನಾದರೂ ಹೇಳಬೇಕು !

ಉ—ಪ್ರಪಂಚವೆಲ್ಲವೂ ಧರ್ಮಮಯವಾಗಿರುವುದರಿಂದ ಒಂದೊಂದು ಬಗೆಯ ಧರ್ಮವೂ ಶಾಖೋಪಶಾಖೆಯಾಗಿ ವೈದಿಕಧರ್ಮದಲ್ಲಿ ಲೌಕಿಕಧರ್ಮವೂ, ಲೌಕಿಕಧರ್ಮದಲ್ಲಿ ವೈದಿಕಧರ್ಮವೂ, ಹಾಗೆಯೇ ದೇಹದಲ್ಲಿ ಲೋಕಧರ್ಮವೂ ಲೋಕದಲ್ಲಿ ದೇಹಧರ್ಮವೂ ಜಡೆಹಣಿದಂತೆ ಬೆರತುಕೊಂಡಿದೆ.

ಅ—ಆದರೆ ನಾವು ಇದು ನಮ್ಮ ಧರ್ಮವೆಂದು ವಿಂಗಡಿಸಿ ತಿಳಿದುಕೊಳ್ಳುವುದು ಹೇಗೆ ?

ಉ—ನಮ್ಮ ಯೋಗ್ಯತೆಯನ್ನು ಕಾಲದೇಶಗಳನ್ನು ಅನುಸರಿಸಿ ಶಾಸ್ತ್ರಕಾರರು ತೋರಿಸಿಕೊಟ್ಟಿರುವ ಮೇರೆಗೆ ತಿಳಿಯಬೇಕು.

ಅ—ಅದಾವುದು ? ಕೊಂಚವಾಗಿ ದಾರಿ ತೋರಿಸಬೇಕು.

ಉ—ಆಗಲಿ. ದಿಕ್ಪ್ರದರ್ಶನಾರ್ಥವಾಗಿ ಕೆಲವನ್ನು ಹೇಳುವೆನು :—

೧ ಲೌಕಿಕಧರ್ಮ ವೈದಿಕಧರ್ಮಗಳು. ಇದೊಂದು ದೊಡ್ಡವಿಭಾಗವು.
೨ ಪ್ರವೃತ್ತಿಧರ್ಮ ನಿವೃತ್ತಿಧರ್ಮಗಳು. ಇದೊಂದು ಬಗೆ „
೩ ಸ್ಥೂಲಧರ್ಮ ಸೂಕ್ಷ್ಮಧರ್ಮಗಳು. ಇದು ಮುಖ್ಯವಿಶೇಷವು.
೪ ಪುರುಷಧರ್ಮ ಸ್ತ್ರೀಧರ್ಮಗಳು. ಇದೊಂದು ವಿಧವಿಶೇಷವು.
೫ ವರ್ಣಧರ್ಮ ಆಶ್ರಮಧರ್ಮಗಳು „
೬ ನಿತ್ಯಧರ್ಮ ನೈಮಿತ್ತಿಕಧರ್ಮಗಳು „
೭ ದ್ರವ್ಯಧರ್ಮ ಗುಣಧರ್ಮಗಳು „
೮ ದೇಶಧರ್ಮ ಕಾಲಧರ್ಮಗಳು „
೯ ಶರೀರಧರ್ಮ ವಯೋವಸ್ಥಾಧರ್ಮಗಳು „
೧೦ ಜಾತಿಧರ್ಮ ಕುಲಧರ್ಮಗಳು „
೧೧ ಮತಧರ್ಮ ಸಮಾಜಧರ್ಮಗಳು „
೧೨ ಆಪದ್ಧರ್ಮ ಮೋಕ್ಷಧರ್ಮಗಳು „

ಈ ಪ್ರಕಾರವಿರುವ ಈ ಧರ್ಮದ ಗುಂಪಿಗೆಲ್ಲ ಕ್ಕು ಮೂಲಕಾರಣವಾಗಿ ಎಲ್ಲಾ ವಸ್ತುಗಳಲ್ಲಿಯೂ ಎಲ್ಲಾ ವ್ಯಾಪಾರಗಳಲ್ಲಿಯೂ ವ್ಯಾಪ್ತವಾಗಿ ಸ್ವಭಾವ ಸಹಜ ಸ್ವರೂಪ ನಿಸರ್ಗ ಎಂದೆನಿಸಿರುವುದು ಪ್ರಕೃತಿಧರ್ಮ ಪುರುಷ ಧರ್ಮವು. ಇದರಲ್ಲಿ (ಚಿದಚಿತ್ತು) ಆತ್ಮಾನಾತ್ಮಧರ್ಮಗಳು ಸೇರಿವೆ. ಇದೇ ಸಾಂಖ್ಯಯೋಗಶಾಸ್ತ್ರಗಳ ತತ್ವಸಾರವಾಗಿದೆ. ಇದು ಎಲ್ಲದರಲ್ಲಿಯು ಅವಶ್ಯಜ್ಞೇಯವಾದ ಬಹುಮುಖ್ಯ ಭಾಗವು. ಈ ಪ್ರಕೃತಿ ಪುರುಷ ಧರ್ಮವು ದೀರ್ಘಾಯುಸ್ಸೂತ್ರಾಂತ್ಯದಲ್ಲಿ ವಿವರಿಸಲ್ಪಟ್ಟಿದೆ. ಹೀಗೆ ವಿಶೇಷಧರ್ಮ ಗಳು ಇನ್ನೂ ವಿಕಲ್ಪಿಸಿಕೊಂಡಹಾಗೆಲ್ಲಾ ಅನಂತಗಳಾಗಿ ಕಾಣಬರುವುವು.

ಅ—ಆ ಪ್ರಕೃತಿ ಪುರುಷಧರ್ಮಗಳು ಎಲ್ಲಾ ದೇಶದಲ್ಲಿಯೂ ಎಲ್ಲಾ ಪ್ರಾಣಿಗಳಲ್ಲಿಯೂ ಸಹಜವಲ್ಲವೆ ?

ಉ—ಸರಿ. ಸಹಜವೇ. ಆದರೆ ಪ್ರಜ್ಞಾಧಿಕವಾದ ಪ್ರಾಣಿವರ್ಗದಲಿ ಉತ್ತಮರೆಂದು ಪ್ರಸಿದ್ಧಿಪಡೆದಿರುವ ಈ ಮಾನವರಲ್ಲಿ ಮಾತ್ರ ಆ ಧರ್ಮವು ಯಾರಾರಲ್ಲಿ ಕಾಲದೇಶಾದ್ಯನುಗುಣವಾಗಿ ಹೇಗೆ ಹೇಗೆ ಇರಬೇಕೋ ಹಾಗೆ ಹಾಗೇ ಯಥಾಕ್ರಮವಾಗಿ ನಡೆಯುತ್ತಿದ್ದ ಪಕ್ಷದಲ್ಲಿ ಋತು ಧರ್ಮದ ಮಳೆ ಬೆಳೆ ಮುಂತಾದ ಪ್ರಪಂಚದ ವ್ಯಾಪಾರವೆಲ್ಲವೂ ಕ್ರಮ ವಾಗಿಯೇ ನಡೆಯಬಹುದಾಗಿತ್ತು. ಈ ಮನುಷ್ಯರಲ್ಲಿ ಆ ಧರ್ಮಗಳು ಆದಿಯಲ್ಲಿದ್ದಂತೆ ಇರದೆ ವ್ಯತ್ಯಸ್ತಗಳಾಗಿರುವುದರಿಂದಲೇ ಪ್ರಪಂಚದ ವ್ಯಾಪಾರಗಳು ಹೆಚ್ಚುಕಡಮೆಯಾಗಿ ಆಯುರಾರೋಗ್ಯಾದಿ ಸುಖಲೋಪ ವಾಗುತ್ತಿರುವುದು. ರಾಜ್ಯದಲ್ಲಿ ಮುಖ್ಯಾಧಿಕಾರಿಗಳು ದಾರಿತಪ್ಪಿದರೆ ಅವರ ಕೆಳಗಿನವರು ದಾರಿತಪ್ಪುವುದು ಸಹಜವಲ್ಲವೆ ? ಅದಕ್ಕೆ ತಕ್ಕ ಫಲವನ್ನು ಆ ದಾರಿತಪ್ಪಿದವರು ಅನುಭವಿಸುವುದಲ್ಲದೆ ಅವರ ಸಹವಾಸದಲ್ಲಿ ರುವ ಸಾಧುಗಳು ಸಜ್ಜನರೂ ಅನುಭವಿಸಬೇಕಾಗಿರುವಂತೆಯೇ ಈ ಮನು ಷ್ಯರು ಮಾಡುವ ಅಧರ್ಮದಿಂದ ತತ್ಸಮೀಪವರ್ತಿಗಳಾದ ಮೃಗ ಪಕ್ಷ್ಯಾದಿ ತಿರ್ಯಕ್‌ಪ್ರಾಣಿಗಳೂ ದುಃಖಭಾಗಿಗಳಾಗುವುವು.

ಅ—ಇದೇನು ? ಮೊತ್ತಮೊದಲು ಈ ಧರ್ಮಗಳು ಮೃಗಾದಿಗಳಿಂದೆ

ಮನುಷ್ಯರಿಗೆ ಬಂದುವೆಂದು ಹೇಳಿದ್ದಿರಿ. ಈಗ ಮನುಷ್ಯರಿಂದ ಪ್ರಪಂಚ ಧರ್ಮವೆನ್ನುವಿರಿ. ಅದು ಹೇಗೆ ?

ಉ—ಅಹುದು. ಈಯೆರಡು ಬಗೆಯು ಸನ್ಯಾಯವಾಗಿದೆ:—ಮೊದಲು ಸೃಷ್ಟಿಕರ್ತಾರನಾದ ಬ್ರಹ್ಮನು ಈ ಪ್ರಪಂಚವನ್ನೆಲ್ಲವನ್ನೂ ಒಂದೇಸಲವೇ ಸೃಜಿಸಲಿಲ್ಲ. ಕ್ರಮ ಕ್ರಮವಾಗಿ ತಪಸ್ಸುಮಾಡಿಮಾಡಿ ಕಾಲ ಗ್ರಹ ನಕ್ಷತ್ರ ದೇವಗಣವನ್ನೂ, ಯಜ್ಞಕ್ರಮವನ್ನೂ, ನೀಚೋಚ್ಚಗಳಾದ ನದೀ ಸಮುದ್ರ ಪರ್ವತಾದಿಗಳನ್ನೂ ಉದ್ಭಿಜ್ಜಾದಿ ಚತುರ್ವಿಧ ಪ್ರಾಣಿವರ್ಗವನ್ನು ಅವುಗಳ ಸುಖದುಃಖ ಧರ್ಮಾಧರ್ಮಾದಿ ದ್ವಂದ್ವಗಳನ್ನೂ ನಿರ್ಮಿಸಿದನು.

ಅ—ಎಲ್ಲಾ ಭಾವಗಳನ್ನು ಬ್ರಹ್ಮನು ಸರ್ವಸಮವಾಗಿ ನಿರ್ಮಿಸಿದನೇ? ಭೇದಮಾಡಿರುವನೇ ?

ಉ—ಅನಾದಿಯಾದ ಚೇತನ ಸ್ವಭಾವ ಯೋಗ್ಯತಾದಿಗಳಿಗೆ ತಕ್ಕಂತೆ ಮಾಡುವಾಗ ಗುಣಗಳು ಹೆಚ್ಚುತ್ತ ಬಂದಿತೆ. ಅದರಿಂದ ಭೇದವುಂಟಾಗಿದೆ.

ಅ—ಅದು ತಿರ್ಯಕ್‌ಪ್ರಾಣಿವರ್ಗದಲ್ಲಿರ ಬಹುದು. ಮನುಷ್ಯರಲ್ಲಿ ಆ ಭೇದವೆಲ್ಲಿದೆ ?

ಉ—ಮನುಷ್ಯರಲ್ಲಿಯೂ ಇದೆ. ನೋಡಿರಿ. ಈ ಜಡವಸ್ತುವಿಗಿಂತಲು ಚೇತನವುಳ್ಳ ಪ್ರಾಣಿಗಳುತ್ತಮರು, ಆ ಪ್ರಾಣಿಗಳೊಳಗೆ ಬುದ್ಧಿಜೀವಿಗಳುತ್ತಮರು, ಅವರಲ್ಲಿ ಮನುಷ್ಯರುತ್ತಮರು, ಅವರಲ್ಲಿ ಓದುವವರು, ಅವರಲ್ಲಿ ವಿದ್ವಾಂಸರು, ಅವರಲ್ಲಿ ನಿಶ್ಚಯಜ್ಞಾನಿಗಳು, ಅವರಲ್ಲಿ ಸತ್ಕರ್ಮಾನುಷ್ಠಾತೃಗಳು, ಅವರಲ್ಲಿಯೂ ಬ್ರಹ್ಮಜ್ಞಾನಿಗಳು ಶ್ರೇಷ್ಠರು. ಇವರೆಲ್ಲರೂ ಧರ್ಮಾಭಿವೃದ್ಧಿಗಾಗಿಯೇ ಬ್ರಹ್ಮನಿಂದ ನಿರ್ಮಿತರಾಗಿದ್ದಾರೆಂದು ತಿಳಿಯಿರಿ. ಹೀಗೆ ಗುಣಕರ್ಮ ವೈಚಿತ್ರ್ಯದಿಂದ ತಾನು ರಚಿಸಿದ ಈ ಚರಾಚರ ಪ್ರಪಂಚದ ಅಭಿವೃದ್ಧಿಗಾಗಿ ದೇವತೆಗಳನ್ನೂ, ಅವರಿಗೋಸ್ಕರ ಯಜ್ಞದಾನ ತಪೋರೂಪ ಕರ್ಮಗಳನ್ನೂ, ತದ್ರಕ್ಷಕ ವೇದಶಾಸ್ತ್ರಗಳನ್ನೂ, ತತ್ಪ್ರಚಾರಾರ್ಥವಾಗಿ ಮರೀಚಿಕಶ್ಯಪಾದಿ ಮಹರ್ಷಿಗಳನ್ನೂ ಸೃಷ್ಟಿಸಿ, ತತ್ತದ್ಯೋಗ್ಯತಾನುಗುಣವಾದ ಕರ್ಮಗಳನ್ನು ಅದರ ಫಲಗಳನ್ನು ಏರ್ಪಾಡುಮಾಡಿರುವನು.

ಅ—ಅದೇನು ಆ ಏರ್ಪಾಡು ?

ಉ—ಅದೇನೆ ? ದೇವತೆಗಳು ಸೂಕ್ಷ್ಮರೂಪವುಳ್ಳವರು. ಅವರು ಪ್ರಾಣಿಗಳನ್ನು ಪಾಲಿಸುವ ವ್ಯಾಪಾರವು ಸೂಕ್ಷ್ಮವಾಗಿ ನಮಗೆ ಅದೃಶ್ಯವಾಗಿಯೇ ನಡೆಯುತ್ತಿರುವುದು. ಅದನ್ನು ಶಾಸ್ತ್ರದೃಷ್ಟಿಯಿಂದಲು ತಪೋಬಲದಿಂದಲು ಮುನಿಗಳು ಮಾತ್ರ ಕಂಡುಕೊಳ್ಳಬಲ್ಲರು. ಆ ದೇವತೆಗಳ ವೃಷ್ಟ್ಯಾದಿ ಮಹಾಕಾರ್ಯದ ಸಾಹಾಯ್ಯಕ್ಕಾಗಿ ರಾಜರಿಗೆ ರೈತರು ಕಂದಾಯವಂ ಕೊಡುವಂತೆ ಕರ್ಮಬದ್ಧರು ಅಗ್ನಿಯಲ್ಲಿ ಹೋಮಮಾಡುವುದೇ ಮೊದಲಾದ ಯಜ್ಞಕರ್ಮದಿಂದ ಆ ದೇವತಾ ಪ್ರೀತಿ ಯಾಗತಕ್ಕುದು. ತೃಪ್ತರಾದ ಆ ದೇವತೆಗಳು ಈ ಪ್ರಜೆಗಳ ಇಷ್ಟಾರ್ಥವನ್ನು ಕೊಡತಕ್ಕುದು. ಹೀಗೆ ದೇವವರ್ಗಕ್ಕೂ ಮನುಷ್ಯವರ್ಗಕ್ಕೂ ಇರುವ ಯಜ್ಞದ ಪರಸ್ಪರ ಸಂಬಂಧವೇ ಸನಾತನ ಧರ್ಮವು. ಈ ಧರ್ಮರಕ್ಷಣಕ್ಕಾಗಿಯೇ ದ್ವಿಜರ ಸೃಷ್ಟಿಯು.

ಅ—ಇಲ್ಲಿ ನಾವು ಮಾಡಿದ ಹೋಮಕ್ಕೂ ಆ ದೇವತೆಗಳಿಗೂ ಸಂಬಂಧವುಂಟೆಂಬುದನ್ನು ಹೇಗೆ ತಿಳಿಯಬೇಕು ?

ಉ—ಮೊದಲೇ ಸೂಕ್ಷ್ಮರೂಪದಿಂದ ಎಂದೆನಷ್ಟೆ ? ಅದರ ಕ್ರಮವು ಹೀಗೆ:—“ ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯ ಮುಪತಿಷ್ಠತೇ ||

ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ || ”

ಮನು ೩—೭೬ (ಅಗ್ನಿಯಲ್ಲಿ ಕೊಟ್ಟ ಹವಿಸ್ಸು ಸೂಕ್ಷ್ಮರೂಪವಾಗಿ ಸೂರ್ಯನಂ ಸೇರುವುದು. ಅಲ್ಲಿಂದ ಮೇಘವಾಗಿ ಮಳೆಯಾಗುವುದು, ಮಳೆಯಿಂದ ಬೆಳೆ, ಅದರಿಂದ ಪ್ರಾಣಿ.) ಹೀಗಿದು ಚಕ್ರದಂತೆ ಜಗತ್ಕಾರ್ಯವು ಪರಿವರ್ತನದಿಂದ ನಡೆಯುತ್ತಲೇ ಇರುವುದೆಂದು ಭಾವಿಸಬೇಕು.

ಅ—ಸಹಜವಾಗಿ ನಡೆಯುವ ಚಕ್ರಪರಿವರ್ತನಕ್ಕೆ ಪ್ರಜಾಪ್ರಯತ್ನವುಂಟೇ?

ಉ—ಉಂಟು. ಸೂಕ್ಷ್ಮರೂಪದಿಂದ ದೇವತೆಗಳು ನಡೆಯಿಸುವ ಕಾರ್ಯಗಳೆಲ್ಲವೂ ಸಹಜವೆನಿಸಿಕೊಂಡೇ ಧರ್ಮರೂಪಗಳಾಗಿವೆ. ಧರ್ಮವೇ ಸ್ವಭಾವ, ಸ್ವಭಾವವೇ ಧರ್ಮ, ಎಂದು ಹಿಂದೆ ಹೇಳಿದ್ದೆನಲ್ಲವೆ ? ಆ ಸ್ವಭಾವರೂಪ ದೇವತಾ ಧರ್ಮದಿಂದ ಪ್ರಜಾಸೌಖ್ಯವೂ, ಪ್ರಜಾಧರ್ಮದಿಂದ ದೇವತಾಪ್ರೀತಿಯೂ,

ಹೀಗೆ ಆಚಕ್ರಪರಿವರ್ತನವು ಪರಸ್ಪರ ಸಂಬಂಧವುಳ್ಳದಾಗಿದೆಯೆಂದು ಭಾವಿಸುತ್ತ ಬನ್ನಿರಿ. ಮುಖ್ಯವಾಗಿ ಸರ್ವವಿಧದಿಂದಲೂ ಆ ದೇವತಾ ತುಷ್ಟ್ಯರ್ಥವಾದ ಯಜ್ಞರೂಪ ಮಹಾಧರ್ಮವೆಂಬ ಒಂದು ದೊಡ್ಡ (ಬೊಕ್ಕಸದ) ಭಂಡಾರದ ರಕ್ಷಣಕ್ಕಾಗಿಯೂ, ವಿರಾಡ್ರೂಪನಾದ ಬ್ರಹ್ಮನು ತಾನು ಮಾಡಿದ ಸೃಷ್ಟಿಯ ಅಭಿವೃದ್ಧಿಗಾಗಿಯೂ, ತನ್ನ ಮುಖ ಬಾಹು ಊರು ಪಾದಗಳಿಂದ ಕ್ರಮವಾಗಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂಬ ವರ್ಣಗಳನ್ನುಂಟುಮಾಡಿ, ತತ್ತದ್ಯೋಗ್ಯತಾ ಸ್ವಭಾವ ಗುಣಾನುಸಾರವಾಗಿ ಅವರವರಿಗೆ ತಕ್ಕ ಕರ್ಮಗಳನ್ನು ಏರ್ಪಾಡುಮಾಡಿದನು. ಆ ಪ್ರಕಾರವೇ ಆದಿಯಲ್ಲಿ ಜನರು ಧರ್ಮದಿಂದ ನಡೆಯುತ್ತಿದ್ದರು. ಶಮದಮಾದಿಸತ್ತ್ವಗುಣಸಂಪನ್ನರಾಗಿದ್ದರು.

" ಅರೋಗಾಃ ಸರ್ವಸಿದ್ಧಾರ್ಥಾಶ್ಚತುರ್ವರ್ಷಶತಾಯುಷಃ
ಕೃತತ್ರೇತಾದಿಷುಹ್ಯೇಷಾ ಮಾಯುಹ್ರಸತಿ ಪಾದಶಃ || ಮನು ೧-೮೩||

(ರೋಗನಿಮಿತ್ತವಾದ ಅಧರ್ಮವಿಲ್ಲದುದರಿಂದ ಎಲ್ಲರೂ ಆರೋಗ್ಯದಿಂದ ವರ್ಷಗಳು ೪೦೦ ಬದುಕುತ್ತ ಸರ್ವೇಷ್ಟಾರ್ಥಗಳನ್ನೂ ಪಡೆಯುತ್ತಿದ್ದರು. ಬಳಿಕ ಆ ಧರ್ಮದಲ್ಲಿ ಒಂದೊಂದು ಭಾಗವು ಕಡಮೆಯಾಗುತ್ತ ಬರಲು ಆ ಯುಗಾನುರೂಪವಾಗಿ ಸುಖಾಯುಸ್ಸುಗಳು ತಗ್ಗಿದುವು.) ಎಂದಿರುವುದರಿಂದ ಈ ಕಲಿಯುಗದಲ್ಲಿ ಜನರು ಒಂದುನೂರು ವರ್ಷಗಳು ಆಯುಃಪ್ರಮಾಣವುಳ್ಳವರಾಗಿದ್ದಾರೆ. ಅದರಲ್ಲಿಯು ಬುದ್ಧಿಪೂರ್ವಕವಾಗಿ ಅಧರ್ಮವನ್ನು ಮಾಡುತ್ತ ಅಕಾಲಮೃತ್ಯುವಶರಾಗುತ್ತಿದ್ದಾರೆ. ಕಾಲಮೃತ್ಯುವೇ ಅರಿದಾಗಿದೆ. ಮೂವತ್ತು ವರ್ಷಕ್ಕೆ ಮುದುಕರಾಗುತ್ತಿರುವರಲ್ಲವೆ ?

ಅ—ಸರಿ. ಅವರವರಿಗೆ ತಕ್ಕ ಕರ್ಮವೆಂದಿರಷ್ಟೆ. ಅದಾವುದು?

ಉ—ಬ್ರಾಹ್ಮಣಗೆ ಯಜನ ಯಾಜನ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹಗಳು ; ಕ್ಷತ್ರಿಯಗೆ ಪ್ರಜಾಪಾಲನೆ ದಾನ ಯಜ್ಞಾಧ್ಯಯನಗಳು, ಗೀತನೃತ್ಯಾದಿ ವಿಷಯಭೋಗದಲ್ಲಿ ಪ್ರಸಕ್ತನಾಗದಿರುವುದು; ವೈಶ್ಯಗೆ ಪಶುಪಾಲನೆ, ದಾನಯಜನಾಧ್ಯಯನಗಳು, ಕೃಷಿ, ವಾಣಿಜ್ಯ, ಬಡ್ಡಿಯ ಜೀವನ, ಮೊದಲಾದುದು; ಶೂದ್ರಗೆ ಅಂತರ್ಬಹಿಶ್ಶೌಚಾಚಮನಸ್ನಾನವೇ ಮೊದ

ಲಾದ ಅಮಂತ್ರಕವಾದ ದಿನಚರ್ಯೆಯು, ಮೇಲಣ ಮೂರುವರ್ಣಗಳ ಪರಿಚರ್ಯೆಯೂ, ಯಥಾಯೋಗ್ಯವಾಗಿ ದಾನ, ದೇವತಾಭಜನ, ಹರಿನಾಮ ಸಂಕೀರ್ತನಾದಿಗಳೂ, ಸಹಜಕರ್ಮಗಳು. ಇವು ಸ್ವಭಾವಕ್ಕೇ ಸೇರಿರುವುವು.

ಈ ಸಹಜ ಧರ್ಮಗಳು ತಪ್ಪದೆ ಕಾಲಾನುಸಾರವಾಗಿ ನಡೆಯಿಸಿಕೊಂಡು ಬರಲು "ರಾಜಾಸ್ಸೃಷ್ಟೋಽಭಿರಕ್ಷಿತಾ, ರಾಜಾ ಕಾಲಸ್ಯ ಕಾರಣಂ" ಅಷ್ಟಾಭಿರ್ಲೋಕಪಾಲಾನಾಂ ಮಾತ್ರಾಭಿರ್ನಿರ್ಮಿತೋ ನೃಪಃ" ಎಂದು ಅರಸರು ಪಟ್ಟಾಭಿಷಿಕ್ತರಾಗಿರುವರು. ಈ ಕಲಿಯುಗದಲ್ಲಿ ಪ್ರಜೆಗಳೂ, ರಾಜರೂ ಕೂಡ ಲೋಭಮೋಹಾದಿ ರಜಸ್ತಮೋ ದೋಷಗಳಿಂದ ವ್ಯಾಪ್ತರಾಗಿ ಅವರವರ ಧರ್ಮವನ್ನು ಅವರವರು ಸರಿಯಾಗಿ ನಡೆಯಿಸದೆ ಕೊಂಚಕೊಂಚವಾಗಿ ಒಬ್ಬರೊಬ್ಬರು ತಪ್ಪುತ್ತಬಂದುದರಿಂದ—

"ಅಧರ್ಮವೃದ್ಧ್ಯಾ ಲೋಕಾನಾ ಮಲ್ಪಮಾಯುರ್ಭವಿಷ್ಯತಿ"
"ನರೇಷು ನೃಪದೋಷೇಣ ಬಾಲ್ಯೇ ಮೃತ್ಯುರ್ಭವಿಷ್ಯತಿ"

ಅಧರ್ಮ ಹೆಚ್ಚಿದರೆ ಅಲ್ಪಾಯುಸ್ಸಾಗುವುದೆಂದು ವಿಷ್ಣುಪುರಾಣ ಕಲಿಧರ್ಮದಲ್ಲಿ ಹೇಳಿರುವಂತೆ ಈಗ ಎಲ್ಲರಿಗೂ ಅನುಭವಕ್ಕೆ ಬರುತ್ತಿದೆಯಲ್ಲವೆ? ಹೀಗಿರುವಾಗ ದೇವತಾಪ್ರೀತಿಕರವಾದ ಯಜ್ಞಾದಿಗಳ ಮಾತೆಲ್ಲಿದೆ? ಯಾವಾಗ ಆ ದೇವತೆಗಳಿಗೂ ಈ ಭೂದೇವತೆಗಳಿಗೂ ಸನಾತನವಾಗಿ ನಡೆಯುತ್ತಬಂದಿದ್ದ ಈ ಧರ್ಮಕರ್ಮ ಸಂಬಂಧವು ಎಷ್ಟೆಷ್ಟು ತಪ್ಪಿತೋ ಆಗಲೇ ಅಷ್ಟಷ್ಟು ಪ್ರಪಂಚದ ಕಾಲವೃಷ್ಟ್ಯಾದಿ ಸ್ವಾಭಾವಿಕ ಧರ್ಮಗಳೂ ಕ್ರಮಕ್ರಮವಾಗಿ ಲೋಪವಾಗುತ್ತ ಬಂದುವು. ಹಾಗೆಯೇ ಪದಾರ್ಥಗಳಲ್ಲಿ ಸಾರವು ಸೋರಿಹೋಯಿತು. ಇದರಿಂದ ನಮಗೆ ಆಯುರಾರೋಗ್ಯಾದ್ಯೈಹಿಕಾಮುಷ್ಮಿಕಸುಖವು ತಪ್ಪಿಹೋಗಿರುವುದಲ್ಲದೆ ನಮ್ಮನ್ನಾಶ್ರಯಿಸಿರುವ ಪ್ರಾಣಿವರ್ಗಕ್ಕೂ ಸುಖಲೋಪ ವುಂಟಾಗಿರುವುದು.

ಅ—ಆ ದೇವತೆಗಳು ಎಂಬವರು ಯಾರು?

ಉ—ಈ ಭೂಮಿಯಲ್ಲಿ ಪುಣ್ಯಕರ್ಮವನ್ನು ಮಾಡಿ ಅದರ ಫಲವನ್ನು ಅನುಭವಿಸಲು ಸ್ವರ್ಗಗತರಾದವರು,

ಶ್ಲೋ॥ ಅಸ್ಮಿನ್ ಕಲ್ಪೇ ಶ್ಯವೋಧಾದಿ ಕರ್ಮಕೃತ್ವಾ ಮಹತ್ಪದಂ ।
ಅವಾಪ್ಯ ದೇವೈರ್ಯಾಃ ಪೂಜ್ಯಾಸ್ತತಸ್ತಾಃ ಕರ್ಮದೇವತಾಃ॥ (ಭಾರತವನ)

ಅ—ನಾವು ನಡೆಯಿಸಿದುದು, ಬಿಟ್ಟುದು, ಯಾರಿಗೆ ಗೊತ್ತುಂಟು? ಬಹಿರಂಗದಲ್ಲಿ ವೇಷಭಾಷಾದಿಗಳು ವ್ಯತ್ಯಸ್ತವಾಗದಿದ್ದರೆ ಸರಿ.

ಉ—ಹಾ!! ಹಾಗಲ್ಲ —

ಶ್ಲೋ॥ ಸೂರ್ಯಃ ಸೋಮೋಯಮಃ ಕಾಲೋ ಮಹಾಭೂತಾನಿಪಂಚಚ॥
ಏತೇ ಶುಭಾಶುಭಸ್ಯೇಹ ಕರ್ಮಣೋ ನವ ಸಾಕ್ಷಿಣಃ ॥ (ಭಾ—ಶಾಂ೨)

ಈ ಒಂಬತ್ತುಮಂದಿಯು ಸದಾ ಸಾಕ್ಷಿಗಳಾಗಿ ನೋಡುತ್ತಲೇ ಇರುವಾಗ ನಾವು ಮಾಡುವ ಕರ್ಮವೆಲ್ಲವು ಬೆಕ್ಕು ಕಣ್ಣುಮುಚ್ಚಿ ಹಾಲು ಕುಡಿದಂತೆಯೆ ಎಂದು ತಿಳಿಯಿರಿ.

ಈಗ ಮುಖ್ಯವಾಗಿ ಈ ವಿಷಯದಲ್ಲಿ "ಯದ್ಯದಾಚಾರತಿ ಶ್ರೇಷ್ಠಃ" ಎಂಬ ನ್ಯಾಯದಿಂದ ಮೊದಲು ಧರ್ಮಲೋಪದಿಂದ ಕೆಟ್ಟುಹೋದ ಎಂದರೆ ವೀರ್ಯವಿಲ್ಲದೆ ಬ್ರಾಹ್ಮಣ್ಯದಿಂದೆ ಕ್ರಮಕ್ರಮವಾಗಿ ಎಲ್ಲಾ ಜಾತಿಯಲ್ಲಿಯೂ ಧರ್ಮಹಾನಿ ಅಧರ್ಮವೃದ್ಧಿ ಯುಂಟಾಯ್ತು. ನಿಜವಾದ ವೀರ್ಯವೇ ನಷ್ಟವಾಗುತ್ತ ಬಂದುದು. ಇದರಿಂದ ಪ್ರಪಂಚದ ಸಹಜಧರ್ಮಗಳು ವ್ಯತ್ಯಸ್ತಗಳಾದುವು.

ಅ—ಪ್ರಪಂಚದ ನಡೆವಳಿಕೆಗಳಿಗೆಲ್ಲಕ್ಕೂ ಹಾಗೆ ನಿಜವಾಗಿ ಧರ್ಮಸಂಬಂಧ ವಿರುವುದಾದರೆ ಆ ಧರ್ಮಶಬ್ದದ ಅರ್ಥವಿನ್ನೆಷ್ಟಿದೆಯೋ ? ಅದರ ರಹಸ್ಯವೇ ತಿಳಿಯದಲ್ಲಾ ? ಮತ್ತೆಲ್ಲಿಯೂ ಹೀಗೆ ಪ್ರಪಂಚಕಾರ್ಯಕ್ಕೆ ಸರ್ವಕ್ಕೂ ಧರ್ಮ ವೊಂದೇ ಕಾರಣವೆಂದು ಯಾರೂ ಹೇಳಿದಂತೆಯೂ ಕಾಣೆನಲ್ಲ ? ಆದರಿಂದ ಅದರ ತತ್ತ್ವವೇನು ?

ಉ—ಧರ್ಮಶಬ್ದಾರ್ಥತತ್ತ್ವವಿಚಾರವಾಗಬೇಕೊ ಈಗ ? ಆಗಲಿ. "ಧರತಿ ಲೋಕಾನ್ ಇತಿ ಧರ್ಮಃ, ಧ್ರಿಯತೇ ವಿಶ್ವಮನೇನವಾ ಧರ್ಮಃ" (ಪ್ರಪಂಚವನ್ನು ಧರಿಸುವನಾಂವನೋ ಅವನು ಧರ್ಮರೂಪನು; ಯಾವನಿಂದ ಸಮಸ್ತ ಲೋಕವು ಧರಿಸಲ್ಪಟ್ಟಿದೆಯೋ ಅವನು ಧರ್ಮರೂಪನು.) ಎಂದು ವ್ಯುತ್ಪತ್ತಿ ಯಿರುವುದರಿಂದ ಯೋಗವಿದ್ವದ್ರೂಢಿಗಳನ್ನನುಸರಿಸಿ ಆಗುವ ಅರ್ಥವು ಅಸಂಕುಚಿತವಾದ ಜಗದ್ಧಾರಣ ಪೋಷಣಕರ್ತೃತ್ವವೆಂದಾಯ್ತು. ಅದು

ಆ ಪರಮಾತ್ಮನಲ್ಲಿ ಹೊರತು ಮತ್ತೆಲ್ಲಿಯೂ ಸಮನ್ವಯಿಸದು. “ಧರ್ಮ ಮೂಲಮಿದಂ ಜಗತ್” ಧರ್ಮೇಸರ್ವಂ ಪ್ರತಿಷ್ಠಿತಂ, ಧಾರಣಾ ದ್ಧರ್ಮ ಮಿತ್ಯಾಹುಃ, “ವೀರಃ ಶಕ್ತಿಮತಾಂ ಶ್ರೇಷ್ಠೋ ಧರ್ಮೋ ಧರ್ಮವಿದುತ್ತಮಃ” ಧರ್ಮೇ ಲೋಕಾಃ ಪ್ರತಿಷ್ಠಿತಾಃ; “ಧರ್ಮೋ ವಿಶ್ವಸ್ಯಜಗತಃ ಪ್ರತಿಷ್ಠಾ” ಇತ್ಯಾದ್ಯನೇಕ ಪ್ರಮಾಣವಚನಗಳಿಂದಲೂ ಧರ್ಮಶಬ್ದದ ಪರಮಮುಖ್ಯಾರ್ಥವು ಸಾಕ್ಷಾದ್ಭಗವಂತನಾದ ಪರಮಪುರುಷನೆಂಬುದೇ ನಿಸ್ಸಂದೇಹವು.

ಮಹಾರಾಜನ ಪ್ರಭುತ್ವಾಧಿಕಾರವು ಮಂತ್ರಿಮೊದಲಾದವರಲ್ಲಿಯೂ ಇರುವಂತೆ ಆ ಜಗದ್ಧಾರಣವೆಂಬ ಅರ್ಥವು ಪ್ರಕೃತಿಯ ಗುಣಕರ್ಮಾದಿಗಳಲ್ಲಿಯೂ ಭಾಗಪ್ರಕಾರವಾಗಿ ಪ್ರಸಿದ್ಧಿಗೆ ಬಂದಿದೆ. ಹಾಗೆಯೇ ಧರ್ಮಶಬ್ದಕ್ಕೆ ಪುಣ್ಯ, ನ್ಯಾಯ, ಸ್ವಭಾವ, ಆಚಾರ, ಮುಂತಾದ ಅರ್ಥಗಳು ಲೋಕರೂಢಿಯಲ್ಲಿ ಇವೆ. ಆ ಪರಮಾತ್ಮನು ಈ ಮುಖ್ಯ ಗೌಣ ಧರ್ಮಗಳೆಲ್ಲವನ್ನೂ ಲೀಲೆಯಿಂದ ಸೃಷ್ಟಿಸಿ ಪೋಷಿಸುತ್ತ ತಾನೇ ಸಮಷ್ಟಿಯಿಂದ ಧರ್ಮಿರೂಪನಾಗಿಯು ವ್ಯಷ್ಟಿಯಿಂದ ಧರ್ಮರೂಪನಾಗಿಯೂ, ಇರುವುದರಿಂದ ಈ ಧರ್ಮಕ್ಕಾತನೇ ಮುಖ್ಯಾಧ್ಯಕ್ಷನೆಂದೂ ಪ್ರಸಿದ್ಧಿಯುಂಟು. “ಧರ್ಮಾಧ್ಯಕ್ಷಃ ಕೃತಾಕೃತಃ, ಧರ್ಮಕೃದ್ಧರ್ಮಗುಬ್ಧರ್ಮೀ” ಎಂದು ನಿತ್ಯಪಾರಾಯಣದ ವಿಷ್ಣುಸಹಸ್ರನಾಮಾವಳಿಯಲ್ಲಿದೆಯಷ್ಟೆ. ಅದರ ವಿವರಣವನ್ನು ವಿಮರ್ಶೆಮಾಡಿರಿ.

ಅ—ಧರ್ಮಶಬ್ದದ ಅರ್ಥವಿಷ್ಟೇನೋ? ಇನ್ನೂ ಏನಾದರೂ ಅರ್ಥವಿಶೇಷ ವಿದೆಯೋ?

ಉ—ಇದೆ. ಮೇಲಿಹೇಳಿದ ಯೋಗರೂಢಿಗಳನ್ನನುಸರಿಸಿಯೇ ಧರ್ಮರಾಜ, ಜಿನ, ಯಮ, ಬುದ್ಧದೇವ, ಸೋಮಯಾಜಿ, ಎಂಬ ಸಂಕೇತಾರ್ಥಗಳೂ “ತ್ರಯಿಾಧರ್ಮಶ್ಶು ತದ್ವಿಧಿಃ” ಎಂದು ವೇದವಿಹಿತಗಳಾದ ಯಜ್ಞದಾನ ತಪೋರೂಪಕರ್ಮಗಳೂ, ಇನ್ನು ಅಹಿಂಸೆ, ಸಾದೃಶ್ಯ, ಉಪನಿಷತ್ತು, ಎಂಬುವೇ ಮುಂತಾದ ಪಾರಿಭಾಷಿಕಸಾಂಕೇತಿಕಾರ್ಥಗಳೂ ಬಹುವಾಗಿ ರೂಢಿಯಲ್ಲಿ ಇವೆ.

ಅ—ಸಾಂಕೇತಿಕ, ಪಾರಿಭಾಷಿಕ, ಎಂದರೇನು?

ಉ–ಜನರು ಒಂದು ವಸ್ತುವಿಗೆ ಲೋಕವ್ಯವಹಾರಕ್ಕೋಸ್ಕರ ಒಂದು ಹೆಸರಿಟ್ಟುಕೊಳ್ಳುವುದು ಸಂಕೇತವು. ಉದಾ–ಧರ್ಮಯ್ಯ, ಕಾಮಣ್ಣ, ಕಲ್ಲಪ್ಪ ಮುಂತಾದುವು–ಶಾಸ್ತ್ರಜ್ಞರು ಶಾಸ್ತ್ರೀಯ ವ್ಯವಹಾರಕ್ಕಾಗಿ ಯೌಗಿಕಾರ್ಥ (ಅವಯವಾರ್ಥ) ಬಲದಿಂದ ಶಾಸ್ತ್ರದಲ್ಲಿ ಎಲ್ಲಾ ಕಡೆಯಲ್ಲಿಯೂ ಸಮನ್ವಯಿಸುವಂತೆ ಏರ್ಪಡಿಸಿಕೊಂಡ ಅರ್ಥವು ಪಾರಿಭಾಷಿಕವು. ಉದಾ–ವ್ಯಾಕರಣದಲ್ಲಿ ಪ್ರಕೃತಿ ಪ್ರತ್ಯಯ ಅಂತರಂಗ ಬಹಿರಂಗಾದಿಶಬ್ದಗಳು; ತರ್ಕದಲ್ಲಿ ಅನ್ವಯ ವ್ಯತಿರೇಕಾದಿಶಬ್ದಗಳು ; ಪಾರಿಭಾಷಿಕಗಳು. ಹಾಗೆಯೇ ಮೀಮಾಂಸೆಯಲ್ಲಿ ಧರ್ಮಪದವು ವೇದವಿಹಿತಕರ್ಮದಿಂದುಂಟಾಗುವ ಅಪೂರ್ವವೆಂಬರ್ಥದಲ್ಲಿಯೂ, ಧರ್ಮಶಾಸ್ತ್ರಗಳಲ್ಲಿ ವೇದಪ್ರತಿಪಾದ್ಯವಾದ ಫಲವನ್ನುಂಟುಮಾಡುವ ಸಾಧನದಲ್ಲಿಯೂ, ಮುಂದೆ ಆಗುವ ಸುಖಕ್ಕೆ ಹೇತುವಾದ ಶುಭಕರ್ಮವೆಂಬರ್ಥದಲ್ಲಿಯೂ, ಈ ಧರ್ಮಶಬ್ದವು ಪಾರಿಭಾಷಿಕವಾಗಿದೆ.

ಅ–ಈ ಧರ್ಮದ ವಿಷಯವೇನೋ ಅಗಾಧವಾಗಿದೆ. ಇರಲಿ. ಇವುಗಳಲ್ಲಿ ನಾವು ತಿಳಿಯಬೇಕಾದುದು, ಕಲಿಯಬೇಕಾದುದು, ಆಚರಿಸಬೇಕಾದುದು ಆವುದೋ ? ಅದನ್ನು ಮಾತ್ರ ನಮಗೆ ಹೇಳಿದರೆ ಸಾಕು. ಆ ಶಾಸ್ತ್ರಗಳ ಮಾತೆಲ್ಲಾ ನಮಗೇತಕ್ಕೆ ?

ಉ–ಅಃ–ಹಾಗಲ್ಲ. ನೀವು ಮಾನವರಲ್ಲವೇನು ? ಮನ್ವಾದಿಗಳು ಧರ್ಮೋಪದೇಶವನ್ನು ಮಾಡಿರುವುದು ಆರಿಗೋಸ್ಕರ ? ಆದರಿಂದ ಹಿಂದೆ ಹೇಳಿದ ಸಮಷ್ಟಿವ್ಯಷ್ಟಿರೂಪಗಳಾದ ಧರ್ಮಗಳೆಲ್ಲವನ್ನೂ ಮಾನವರಾದ ನಾವು ಸಮಾಸವ್ಯಾಸಯೋಗದಿಂದ ಅವಶ್ಯವಾಗಿ ತಿಳಿಯಬೇಕು. ಯುಕ್ತಾನುಸಾರವಾಗಿ ಕಲಿಯಲೂ ಬೇಕು. ನಮ್ಮ ಯೋಗ್ಯತಾನುಗುಣವಾಗಿ ಆಚರಿಸಲೂ ಬೇಕು. ಆದರೆ ಒಮ್ಮೆಯೇ ಅಲ್ಲ. ಕ್ರಮಕ್ರಮವಾಗಿ ತಿಳಿದು, ಕಲಿತು, ಅವರಲ್ಲಿ ಯಾವುದು ತನಗೆ ತಕ್ಕುದೆಂಬುದನ್ನಾಲೋಚಿಸಿ, ಆಯ್ದುಕೊಂಡು ಅದನ್ನು ಬಿಡದೆ ಸಾಧ್ಯವಾದಮಟ್ಟಿಗೆ ಕಾಲಾನುಸಾರವಾಗಿ ಅನುಷ್ಠಿಸುತ್ತ ಸಾಧಿಸುತ್ತ ಬರಬೇಕು.

ಅ–ಸರಿ. ಸಮಾಸ, ವ್ಯಾಸ, ಎಂದರೇನು ? ಅವಾವುದು ?

ಉ—ಅದು ಬೇರೆ ಅಲ್ಲ. ಹಿಂದೆ ಹೇಳಿದ ಸಾಮಾನ್ಯ ವಿಶೇಷಧರ್ಮಗಳೇ. ಸಮಾಸ ಎಂದರೆ ಸಂಗ್ರಹ, ಸಮಷ್ಟಿ, ವ್ಯಾಸ=ವಿಸ್ತಾರ, ವ್ಯಷ್ಟಿ. "ಯುಕ್ತಂ ಹಿ ವಿದುಷಾಂ ಲೋಕೇ ಸಮಾಸವ್ಯಾಸಧಾರಣಂ" ಎಂದಿರುವುದರಿಂದ ಈ ಧರ್ಮವಿಷಯವನ್ನು ಸಂಕ್ಷೇಪವಾಗಿಯೂ ವಿಸ್ತಾರವಾಗಿಯೂ ಮನಸ್ಸಿಗೆ ತರತಕ್ಕುದೇ ಬುದ್ಧಿಶಾಲಿಗಳಿಗೆ ಉಚಿತವೆಂದು ಹೇಳಲ್ಪಟ್ಟಿದೆ.

ಅ—ಸಾಮಾನ್ಯ ವಿಶೇಷಗಳನ್ನು ಹೇಗೆ ಕಂಡುಹಿಡಿಯುವುದು ? ಕೆಲವು ಕಡೆ ಸಾಮಾನ್ಯವೇ ವಿಶೇಷವೆನಿಸುವುದು, ಮತ್ತೊಂದುಕಡೆ ವಿಶೇಷವೇ ಸಾಮಾನ್ಯವಾಗಿಯು ತೋರಿಬರುತ್ತದೆ.

ಉ—ಅಹುದು. ಸಾಮಾನ್ಯವು ವಿಶೇಷಾಪೇಕ್ಷವೂ ವಿಶೇಷವು ಸಾಮಾನ್ಯಾಪೇಕ್ಷವೂ ಆಗಿರುವುದು. ಅನೇಕ ವಿಶೇಷಗಳು ಸೇರಿ ಒಂದು ಸಮಷ್ಟಿವಸ್ತು, ಒಂದು ಸಮಷ್ಟಿಯಲ್ಲಿ ಅನೇಕವ್ಯಷ್ಟಿ ಧರ್ಮಗಳು, ತೋರಿಬರುವುವು. ಹೀಗೆ ಎಲ್ಲಾ ಲೋಕವ್ಯವಹಾರದಲ್ಲಿಯೂ, ಶಾಸ್ತ್ರದಲ್ಲಿಯೂ, ಮೊದಲು ಈ ಸಮಷ್ಟಿ ವ್ಯಷ್ಟಿ ಜ್ಞಾನವೇ ಮಾನವಗೆ ಅತ್ಯವಶ್ಯವಾಗಿರುವುದು. ಈ ತಾರತಮ್ಯಜ್ಞಾನಸಂಪಾದನವೇ ವಿದ್ಯಾಭ್ಯಾಸಕ್ಕೆ ಫಲವೆಂದು ಭಾವಿಸಿರಿ. ಒಂದೊಂದು ವಿಷಯದಲ್ಲಿಯು ಈ ಸ್ಥೂಲ ಸೂಕ್ಷ್ಮ ವಿಚಾರವು ಬಹುವಾಗಿರುವುದರಿಂದ ಅದನ್ನು ವಿದ್ಯಾರ್ಥಿಯು ಮನದಲ್ಲಿ ತನಗೆ ತಾನೇ ಮನನ ಮಾಡುವ ಅಭ್ಯಾಸವಿಡಬೇಕು.

ಅ—ಅದು ಹೇಗೆ ಮನನಮಾಡಬೇಕೊ? ಕೊಂಚ ದಾರಿ ತೋರಿಸಬೇಕು.

ಉ—ಬಹು ಗುಣಗಳು, ಬಹು ಕ್ರಿಯೆಗಳು ಒಂದೇ ಕಡೆಯಲ್ಲಿ ಏಕ ಕಾಲದಲ್ಲಿ ಕೂಡಿ ಯಿದ್ದರೆ ಆ ಸ್ಥೂಲಭಾಗಕ್ಕೆ ಸಮಷ್ಟಿ ಯೆಂದು, ಅವುಗಳಲ್ಲಿ ಒಂದೊಂದನ್ನೂ ಬೇರ್ಪಡಿಸಿದರೆ ಬಹುಭಾಗವಾಗಿ ತೋರಿಬರುವ ಸೂಕ್ಷ್ಮ ಸೂಕ್ಷ್ಮಾಂಶಕ್ಕೆ ವ್ಯಷ್ಟಿಯೆಂದು ಲೋಕದಲ್ಲಿ ವ್ಯವಹಾರವುಂಟು.

ಅ—ಅದು ವ್ಯವಹಾರ ಮಾತ್ರವೇ ಹೊರತು ವಾಸ್ತವವೇ ?

ಉ—ವ್ಯವಹಾರವನ್ನು ವಾಸ್ತವವಲ್ಲವೆಂದವರಾರು ? ವಾಸ್ತವವಲ್ಲದುದನ್ನು ವ್ಯವಹರಿಸುವುದು ಹೇಗೆ? ಅನುಭವಕ್ಕೆ ಬಾರದುದನ್ನು ವಾಸ್ತವ

ವಹುದು ವಾಸ್ತವವಲ್ಲ " ಎಂಬುದು ತಾನೆ ಹೇಗೆ ? ಮನದಲ್ಲಿ ವಿಚಾರವೇ ಹುಟ್ಟದವಗೆ ಸೂಕ್ಷ್ಮವಿಷಯಗಳು ಅನುಭವಕ್ಕೆ ಬರುವುದು ಹೇಗೆ ? ಆದರಿಂದ ಮನುಷ್ಯನು ಎಲ್ಲೆಲ್ಲಿಯೂ ಸೂಕ್ಷ್ಮವಿಷಯಗಳ ವಿಮರ್ಶೆಯುಳ್ಳವನಾಗಿರಬೇಕು. ವಿಚಾರವಿಲ್ಲದೆ ಸುಮ್ಮನೆ "ಎತ್ತು ಈನಿತು" ಎಂದೊಡನೆಯೇ "ಕೊಟ್ಟಿಗೆಯಲ್ಲಿ ಕಟ್ಟು" ಎಂಬಂತೆ ಗತಾನುಗತಿಕನ್ಯಾಯದಿಂದ ನಂಬಲು ಬಾರದು. ನಿರಾಕರಿಸಲು ಬಾರದು.

ಅ—ಆಸಮಷ್ಟಿವ್ಯಷ್ಟಿ ವಿಚಾರವನ್ನು ಮನನಮಾಡುವ ಕ್ರಮವು ಹೇಗೆ? ಉದಾಹರಣಮೂಲವಾಗಿ ಸ್ವಲ್ಪವಿವರಿಸಬೇಕು.

ಉ—ಒಂದು ವಸ್ತುವಿನಲ್ಲಿ ಅನೇಕಧರ್ಮಗಳು, ಒಂದು ಧರ್ಮದಲ್ಲಿ ಅನೇಕ ಭಾಗಗಳು, ಒಂದೊಂದು ಭಾಗದಲ್ಲಿಯೂ ಅನೇಕವಾಗಿ ಅವಾಂತರಭಾಗಗಳು, ಕಾಣಬಂದಾಗ ಅವುಗಳನ್ನು ವ್ಯಷ್ಟಿವಸ್ತುಗಳು ವ್ಯಷ್ಟಿಧರ್ಮಗಳು ಎಂದು; ಆ ಭಾಗಗಳನ್ನು (ಧರ್ಮಗಳನ್ನು) ಒಂದು ರಾಶಿಮಾಡಿ ಮೊತ್ತವಾಗಿ ಹೇಳುವಾಗ ಸಮಷ್ಟಿವಸ್ತು ಸಮಷ್ಟಿಧರ್ಮವೆಂದು ಹೇಳಬೇಕು. ಉದಾ;— ದೇಶ ಸಮಷ್ಟಿಯಾದಾಗ ಗ್ರಾಮ ವ್ಯಷ್ಟಿ, ಗ್ರಾಮ ಸಮಷ್ಟಿಯಾದಾಗ ಕೇರಿ ಬೀದಿ ವ್ಯಷ್ಟಿ; ಬೀದಿ ಸಮಷ್ಟಿಯಾದಾಗ ಮನೆ ವ್ಯಷ್ಟಿ; ಮನೆ ಸಮಷ್ಟಿಯೂದಾಗ ಗೋಡೆ, ಕಂಬ, ತೊಲೆ, ಮೊದಲಾದುದು ವ್ಯಷ್ಟಿ. ಹೀಗೆಯೇ ಕಾಲಾದಿಗಳಲ್ಲಿಯೂ ಊಹಿಸಬೇಕು. ಯುಗ ಸಮಷ್ಟಿ ಸಂವತ್ಸರ ವ್ಯಷ್ಟಿ; ಸಂವತ್ಸರ ಸಮಷ್ಟಿ ಮಾಸ ವ್ಯಷ್ಟಿ; ಮಾಸ ಸಮಷ್ಟಿ ಪಕ್ಷ ವ್ಯಷ್ಟಿ; ಪಕ್ಷಸಮಷ್ಟಿ ದಿನ ವ್ಯಷ್ಟಿ; ದಿನ ಸಮಷ್ಟಿ ಜಾವ ವ್ಯಷ್ಟಿ ; ಜಾವ ಸಮಷ್ಟಿ ಗಳಿಗೆ ವ್ಯಷ್ಟಿ; ಗಳಿಗೆ ಸಮಷ್ಟಿ ವಿಘಟಿಕೆ ವ್ಯಷ್ಟಿ; ಹೀಗೆಯೆ. ಕ್ರಿಯೆ—೧೫ ದಿನಕ್ಕೆ ಸಾಧ್ಯವಾದ ಕಾಶೀಯಾತ್ರೆ ಸಮಷ್ಟಿ-ಒಂದೊಂದು ದಿನದ ಪ್ರಯಾಣ ವ್ಯಷ್ಟಿ; ಒಂದು ದಿನದ ಪ್ರಯಾಣ ಸಮಷ್ಟಿ ಒಂದು ಘಂಟೆ ನಡೆವುದು ವ್ಯಷ್ಟಿ; ಒಂದು ಘಂಟೆಯ ಪ್ರಯಾಣ ಸಮಷ್ಟಿಯಾದಾಗ ಒಂದು ನಿಮಿಷದ ನಡೆ ವ್ಯಷ್ಟಿ—ಬಳಿಕ ಒಂದೊಂದು ಹೆಜ್ಜೆ ಹಾಕುವುದು ಹೀಗೆ ಕ್ರಿಯಾಭಾಗಗಳನ್ನು ಊಹಿಸಬೇಕು.

ಈ ಪ್ರಕಾರವೆ ಸನಾತನ ಧರ್ಮವಿಷಯವನ್ನೂ ಚಿಂತಿಸುವ :—ಧರ್ಮಾತ್ಮ ಸಮಷ್ಟಿ ಸ್ವಭಾವಾಖ್ಯ ಪ್ರಾಕೃತಧರ್ಮ ವ್ಯಷ್ಟಿ; ಪ್ರಾಕೃತಧರ್ಮ ಸಮಷ್ಟಿ ಭೂತಧರ್ಮ ವ್ಯಷ್ಟಿ ; ಭೂತಧರ್ಮ ಸಮಷ್ಟಿ, ಸಂಸಾರಿಧರ್ಮ ವ್ಯಷ್ಟಿ; ಸಂಸಾರಿ ಧರ್ಮ ಸಮಷ್ಟಿ, ಚೇತನಧರ್ಮ ವ್ಯಷ್ಟಿ ; ಚೇತನಧರ್ಮ ಸಮಷ್ಟಿ, ಮನುಷ್ಯ ಧರ್ಮ ವ್ಯಷ್ಟಿ ; ಮನುಷ್ಯಧರ್ಮ ಸಮಷ್ಟಿ, ಬ್ರಾಹ್ಮಣಧರ್ಮ ವ್ಯಷ್ಟಿ ; ಬ್ರಾಹ್ಮಣಧರ್ಮ ಸಮಷ್ಟಿ, ಯತಿಧರ್ಮ ವ್ಯಷ್ಟಿ ; ಯತಿಧರ್ಮ ಸಮಷ್ಟಿ, ಹಂಸಧರ್ಮ ವ್ಯಷ್ಟಿ ; ಹಂಸಧರ್ಮ ಸಮಷ್ಟಿ, ಪರಮಹಂಸಯೋಗಿ ಧರ್ಮ ವ್ಯಷ್ಟಿ ; ಯೋಗಿಧರ್ಮ ಸಮಷ್ಟಿ, ಸಮಾಧಿಸ್ಥಯೋಗಿಧರ್ಮ ವ್ಯಷ್ಟಿ; ಹೀಗೆಲ್ಲೆಲ್ಲಿಯೂ ಸ್ಥೂಲಸೂಕ್ಷ್ಮ ವಿಚಾರದಿಂದ ಸಮಷ್ಟಿ ವ್ಯಷ್ಟಿ ವಿಭಾಗಗಳನ್ನು ಗ್ರಹಿಸುತ್ತ ಬರಬೇಕು.

ಅ—ಈ ವಿಷಯ ವಿಭಾಗವು ನಮ್ಮ ಬುದ್ಧಿಯಲ್ಲಿ ನಾವು ಉಂಟುಮಾಡಿ ಕೊಳ್ಳತಕ್ಕದೆ ? ವಸ್ತುಗಳಲ್ಲಿ ಪ್ರತ್ಯಕ್ಷವಾಗಿ ಕಾಣಬರುವುದೆ ? ಕತ್ತಲೆ ಬೆಳಕುಗಳಂತೆ ವಿರುದ್ಧವಾದ ವಿಷಯಗಳೆರಡೂ ಒಂದೇಕಡೆ ಒಂದೇಕಾಲದಲ್ಲಿ ಇರುವುದುಂಟೆ?

ಉ—ಅಯ್ಯಾ ನಿನ್ನ ಪ್ರಶ್ನೆಯ ವಿಷಯವು ಬಹಳ ದೊಡ್ಡದು. ಒಂದೇ ಮಾತಿನಿಂದ ಉಂಟೆಂದುತ್ತರ ಹೇಳಿದರೆ ತೃಪ್ತಿಯಾಗದು. ಆದರೂ ಕೇಳು:— ಬುದ್ಧಿವಿಷಯವು ಬುದ್ಧಿಗತವು. ವಸ್ತುವಿಷಯವು ವಸ್ತುಗತವು. ವಸ್ತುವೇ ಇಲ್ಲದ ನಿರ್ವಿಷಯಕವಾದ ಬುದ್ಧಿ ಅಪ್ರಸಿದ್ಧವೆ. ಹೀಗೆಂದರೇನು ತಿಳಿದಹಾ ಗಾಯ್ತು. ಅದರಿಂದ ಕೊಂಚಕೊಂಚವೇ ಗ್ರಹಿಸುತ್ತ ಬನ್ನಿರಿ. ಸಾಮಾನ್ಯವಾ ಗಿ ದಿಕ್‌ಪ್ರದರ್ಶನಮಾಡುವೆನು. ಮತ್ತಮೊದಲು ಪ್ರಪಂಚವೆಲ್ಲವು ಸದ್ರೂಪ ಧರ್ಮವೆಂದು ಚಿದ್ರೂಪಧರ್ಮವೆಂದು ಎರಡುಬಗೆಯಾಗಿದೆ ಎಂದು ಭಾವಿ ಸಿರಿ. ದ್ವೀಪವಿದೆ ಸಮುದ್ರವಿದೆ ಇತ್ಯಾದಿಗಳು ಸದ್ರೂಪಗಳು. ಇದು ಸಮು ದ್ರ ಇದು ದ್ವೀಪ ಇದು ಗಾಳಿ ಇದು ಬೆಳಕು ಇತ್ಯಾದಿ ಜ್ಞಾನವು (ಅರಿವು) ಚಿದ್ರೂಪವು. ಇದರಲ್ಲಿ ಕ್ರಿಯೆಯು ಅಡಗಿದೆ. ಈ ಕ್ರಿಯೆಯ ಇರವು (ಸತ್ತೆ) ಜ್ಞಾನಾಧೀನವು. ಜ್ಞಾನದ (ಅರಿವಿನ) ಇರವು (ಸತ್ತೆ) ಸ್ವತಃ ಸಿದ್ಧವು, ಸ್ವತಂತ್ರವು, ವ್ಯಾಪಕವು, ಆಗಿರುತ್ತದೆ. ಭಾವಿಸತಕ್ಕವನ ಜ್ಞಾನಕ್ಕೆ

ತಕ್ಕಂತೆ ವಸ್ತುವಿನ ಇರವು ಇರುತ್ತದೆ. ಯಾವಾಗ ವಸ್ತುವನ್ನು ಗ್ರಹಿಸುವ ನೋ ಆಗಲೇ ಇದು ಹೀಗೆ ಎನ್ನುವನು. ಅರಿಯದಾಗ ಹೇಳುವುದು ಹೇಗೆ? ಆದರಿಂದ ಎಲ್ಲಾವಸ್ತುಗಳು, ಎಲ್ಲಾ ಗುಣಗಳು, ಎಲ್ಲಾ ಕ್ರಿಯಗಳೂ, ಅರಿವಿನಲ್ಲಿಯೇ (ತೋರ್ಕೆಯಲ್ಲಿಯೇ) ಅಡಗಿವೆ. "ಅರಿಯದವಗೆ ಅಂಜಿಕೆ ಇಲ್ಲ" ಎಂಬಂತೆ ಅವನಭಾಗಕ್ಕೆ ವಸ್ತು "ಸತ್ತೆ" ಸ್ವತಃ ಸಿದ್ಧವಾಗಿದ್ದರೂ ಇಲ್ಲದಂತೆಯೇ ಅಲ್ಲವೆ ? ಈ ವಿಷಯವೆಲ್ಲವು ಧರ್ಮಾವತಾರಿಕೆಯಲ್ಲಿ ವಿವರಿಸಿದೆ. ನೋಡಿರಿ. ಈ ಯರಿವಿಗೆ ಜ್ಞಾನ, ಬುದ್ಧಿ ಎಂಬ ವ್ಯವಹಾರವಿದೆಯಷ್ಟೆ, ಆ ಬುದ್ಧಿ ಎಂಬುದು ಅಂತಃಕರಣಗಳು ಅಯ್ದರಲ್ಲಿ ಒಂದು ಆಗಿದೆ.

ಅ—ಅವು ಅಯ್ದು ಆವುವು ?

ಉ—ಕೇಳು. ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನ, ಎಂದು ಆ ಅಂತಃಕರಣವು ಅಯ್ದು ವಿಧವು. ಅದರಲ್ಲಿ ಸಂಕಲ್ಪ ವಿಕಲ್ಪರೂಪವಾದುದು ಮನಸ್ಸು, ವಸ್ತುನಿಶ್ಚಯಾತ್ಮಕವಾದುದು ಬುದ್ಧಿ, ಅಭಿಮಾನ (ನಾನು ನನ್ನ) ಎಂಬ ಗರ್ವರೂಪ ಅಥವಾ ಅಸ್ವರೂಪದಲ್ಲಿ ಸ್ವರೂಪ ಮತಿಯುಂಟಾಗುವುದು ಅಹಂಕಾರವು, ಮೊದಲು ಅನುಭವಿಸಿದುದನ್ನು ನೆನಸುವುದು ಚಿತ್ತವು, ಆ ಚಿತ್ತತದ ವ್ಯಾಪ್ತಿಯೇ ಚೇತನವು, ಎಂದು ರೂಢಿಯುಂಟು. ಇವರಲ್ಲಿ ಆ ಬುದ್ಧಿ ಆರು ಬಗೆ, ಅದರ ವಿಷಯಗಳು ಆರು ಬಗೆಯಾಗಿವೆ.

ಅ—ಆ ಆರುಬಗೆಗಳಾವುವು ?

ಉ—ಕೇಳು-ಶ್ರೋತ್ರಬುದ್ಧಿ, ಸ್ಪರ್ಶನಬುದ್ಧಿ, ಚಕ್ಷುರ್ಬುದ್ಧಿ, ರಸನಬುದ್ಧಿ, ಘ್ರಾಣಬುದ್ಧಿ, ಮನೋಬುದ್ಧಿ, ಎಂದು. ಇವಕ್ಕೆ ವಿಷಯಗಳು ಆರು: ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವ್ವೈದು, ಮನಸ್ಸಿಗೆ ಚಿಂತ್ಯವಾದ ಅವ್ಯಕ್ತ ಸೂಕ್ಷ್ಮ ಚಿದ್ವಿಷಯವೊಂದು ಸೇರಿ ಆರು. ಈ ಆರು ವಿಷಯಗಳನ್ನು ಆವನಾಯಿಂದ್ರಿಯಗಳು ಆತ್ಮ ಮನಸ್ಸಂಯೋಗದಿಂದ ಗ್ರಹಿಸುವಾಗ ಶಾಸ್ತ್ರಜನ್ಯಜ್ಞಾನ ಲೋಕಾನುಭವಗಳೆರಡನ್ನೊಂದುಗೂಡಿಸಿಕೊಂಡು ಭ್ರಮಪ್ರಮಾದಾದಿ ದೋಷಗಳಿಗೆ ಒಳಗಾಗದೆ ತತ್ತ್ವಾಂಶಗಳನ್ನು ವಿಮರ್ಶಿಸಿದರೆ ವಸ್ತುಗತವಾದ ನಿಜಧರ್ಮವೇ ಗೋಚರಿಸುವುದು. ಅದುವರೆಗಿದ್ದ ಭ್ರಾಂತಿಮುಂತಾದ ದೋಷವು ತೊಲಗುವುದು.

ಅ–ಸರಿ. ಕತ್ತಲೆ ಬೆಳಕುಗಳಂತೆ ವಿರುದ್ಧ ಧರ್ಮಗಳೊಂದೇ ಎಡೆಯಲ್ಲಿ ಇರುವುವೋ ? ?

ಉ–ಅಹ ! ಇರುವುವು. ಅಷ್ಟುಮಾತ್ರವೇ ಅಲ್ಲ. ಇನ್ನು ಅನೇಕ ಶತಸಹಸ್ರಧರ್ಮಗಳು ಅನೇಕ ಪ್ರಕಾರಗಳಾಗಿ ಒಂದೊಂದು ವ್ಯಕ್ತಿಯಲ್ಲಿಯೂ ಪೊದೆಯಾಗಿ ಹಣೆದುಕೊಂಡು ಪ್ರವರ್ತಿಸುತ್ತಿವೆ. ಅದರಿಂದ ಇವುಗಳಲ್ಲಿ ಪರಸ್ಪರ ವಿರುದ್ಧಧರ್ಮಗಳೂ ಇರುವುದುಂಟು. ಅವನ್ನು ಪ್ರಬಲ ದುರ್ಬಲಭಾವಗಳಿಂದ ಪ್ರೌಢರು ಕಂಡುಕೊಳ್ಳಲರ್ಹರಾಗಿರುತ್ತಾರೆ. ಉದಾ :–ಲೋಕದಲ್ಲಿ ಸರ್ವದ್ರವ್ಯವು ಪಾಂಚಭೌತಿಕವು. ಯಾವ ಭಾಗ ಹೆಚ್ಚಿದ್ದರೆ ಆ ಹೆಸರು ಬರುವುದು. ಈಗ ನಮ್ಮ ಶರೀರವು ಪಾರ್ಥಿವವಷ್ಟೆ ? ಜಲಾದಿಗಳಿಲ್ಲವೆ ? ಹಾಗೆಯೇ ದ್ರಾಕ್ಷೆ ಸಿಹಿ ಎನ್ನುವರು. ಅದರಲ್ಲಿ ಉಪ್ಪು, ಹುಳಿ, ಕಾರ, ಒಗರು ಎಲ್ಲಾರಸವು ಇದೆಯಲ್ಲವೆ? ಮನುಷ್ಯರಲ್ಲಿಯು ಸಾತ್ವಿಕನೆನಿಸಿದವನಲ್ಲಿ ರಜಸ್ತಮಃಕಾರ್ಯವಾದ ಕೋಪಾದಿಗಳೂ ಕಾಣಬರುವುದುಂಟು. ತಾಮಸನಲ್ಲಿ ಶಾಂತಿಯೂ ಅಂತೆಯೇ ಸ್ವಲ್ಪವಾಗಿ ತೋರುವುದು. ಆದುದರಿಂದ ಈ ಪ್ರಪಂಚವು ಸತ್ಯಾನೃತಗುಣಸಂಮಿಶ್ರವಾದುದು. ಅದರಲ್ಲಿ ಯಾವುದು ಅಧಿಕವೋ ಆ ಹೆಸರು ರೂಢಿಗೆ ಬರುವುದು. ಮಿಕ್ಕ ವಿರುದ್ಧಾಲ್ಪಗುಣಗಳು ದುರ್ಬಲಗಳಾಗಿ ಆ ಯೆಡೆಯಲ್ಲಿಯೇ ಪಂಜರದ ಪ್ರಾಣಿಯಂತೆ ಅಡಗಿರುವುವು.

ಅ–ವಸ್ತುಗಳಲ್ಲಿ ಯಾದರೆ ಧರ್ಮಗಳು, ಗುಣಗಳು, ಬೆರೆಯುವುವು. ಈಗ ಹುಟ್ಟುಸಾವು ಮುಂತಾದ ಕ್ರಿಯೆಗಳಲ್ಲಿ ವಿರುದ್ಧಾಂಶವು ಬೆರೆವುದಿಲ್ಲವಲ್ಲ ?

ಉ–ಏತಕ್ಕಿಲ್ಲ ? ಅಲ್ಲಿಯೂ ವಿಚಾರಿಸಿದರೆ ಸೂಕ್ಷ್ಮವಾಗಿ ಬೆರೆತುಕೊಂಡೇ ಕಾಣಬರುತ್ತ ಇವೆ. ನೋಡಿರಿ.

ಅ–ಎಲ್ಲಿ ಸ್ವಲ್ಪ ಉದಾಹರಿಸಿ ತೋರಿಸಬೇಕು.

ಉ–ಆದರೆ ಕೇಳಿರಿ :–ಲೋಕದಲ್ಲಿ ಈಗ ವಿರುದ್ಧಧರ್ಮಗಳು ಒಂದೇ ಕಡೆಯಲ್ಲಿ ಬೆರೆತಿರುವುದು ಕೂಡ ಸಹಜವಾಗಿಯೇ ಕಾಣಬರುವುದು. ಉದಾ:

ಸೃಷ್ಟಿ, ಸ್ಥಿತಿ, ಲಯ, ಎಂದರೆ ಹುಟ್ಟುವುದು, ಬೆಳೆಯುವುದು, ಸಾಯುವುದು, ಎಂದು ಜನರೂಢಿಯಷ್ಟೆ? ಇವರಲ್ಲಿ ಸೃಷ್ಟಿಲಯಗಳೆರಡೂ ವಿರುದ್ಧಧ

ರ್ಮಗಳು. ಆದರೂ ಸೃಷ್ಟಿಯೆಂಬುದು ಒಂದು ಸಮಷ್ಟಿಧರ್ಮವು. ಇದು ಬೀಜವನ್ನು ನೆಲದಲ್ಲಿ ಬಿತ್ತಿದುದು ಮೊದಲು ಮೊಳಕೆ ಏಳುವವರಿಗೆ ಅಲ್ಲವೆ? ಬಿತ್ತುವುದು ಸೃಷ್ಟಿಯ ಸೃಷ್ಟಿ, ಬಳಿಕ ಆ ಬೀಜವು ನೆಲದೊಳಗೆ ನೀರಿನಲ್ಲಿ ನೆನೆದು ಉಬ್ಬಿ ಒಡೆದು ಅಂಕುರರೂಪಿನ ಮೊಳಕೆಯಾಗಿ ಪರಿಣಾಮವಾಗುವ ವ್ಯಾಪಾರಗಳೆಲ್ಲವು ಆ ಸೃಷ್ಟಿಯ ಪಾಲನೆ. ಆ ಮೊಳಕೆ ಮೇಲಕ್ಕೆ ಬಂದು ಗಿಡವೆನಿಸಿದ ಮೇಲೆ ಆ ಸೃಷ್ಟಿಕಾರ್ಯದ ಲಯವು. ಹೀಗೆಯೇ ಆ ಹೊಲ ಕುಯ್ಯುವರೆಗೆ ಪಾಲನೆ ಎಂದು ಸಮಷ್ಟಿಯಾದ ರೂಢಿಯಾಯ್ತು. ಅದರಲ್ಲಿ ಪಾಲನೆಯ ಸೃಷ್ಟಿ, ಪಾಲನೆಯ ಪಾಲನೆಯು, ಕುಯ್ಯಲಾರಂಭಿಸಲು ಆ ಪಾಲನೆಗೆ ಲಯವು ; ಆ ಲಯದ ಆರಂಭವೇ ಲಯದ ಸೃಷ್ಟಿ, ಆ ಕಾಳು ಅಷ್ಟು ಅನ್ನರೂಪವಾಗಿ ವಿಕಾರ ಹೊಂದುವವರೆಗೆ ಲಯದ ಪಾಲನೆ. ಆ ಕಾಳಿನ ರೂಪವೇ ನಷ್ಟವಾಗಲು ಲಯದ ಲಯ ಎಂಬ ಸೂಕ್ಷ್ಮಾಂಶಗಳನ್ನು ಚಿಂತಿಸುತ್ತ ಬರಬೇಕು. ಹೀಗೆಯೇ ಎಲ್ಲಾ ವಿಷಯಗಳಲ್ಲಿಯು ಸೂಕ್ಷ್ಮಾಂಶಗಳನ್ನು ವಿಮರ್ಶಿಸುವ ಅಭ್ಯಾಸಬಲದಿಂದ ಸಾಮಾನ್ಯ ವಿಶೇಷ ಧರ್ಮ ವಿಷಯಗಳು ಮನಸ್ಸಿಗೆ ತಾನಾಗಿಯೇ ಬೋಧವಾಗುತ್ತ ಬರಲು ಆಜ್ಞಾನವು ಪರಮಾನಂದವನ್ನುಂಟುಮಾಡುವುದು.

ಅ—ಸರಿ. ಸಮಷ್ಟಿ ವ್ಯಷ್ಟಿ, ಸ್ಥೂಲ ಸೂಕ್ಷ್ಮ, ಸಾಮಾನ್ಯವಿಶೇಷ, ಇವೆಲ್ಲ ಹತ್ತಿರ ಹತ್ತಿರ ಒಂದೇ—ಸಮಾನಾರ್ಥಗಳಾದಂತೇ ಆಯ್ತು ಸರಿಯೇ. ಈಗ ಲೋಕದಲ್ಲಿ “ ಅವರಲ್ಲಿ ಯೇನು ವಿಶೇಷ? ಈ ಹೊತ್ತೇನು ವಿಶೇಷ?” ಎಂದು ಕೇಳುತ್ತಿರುವರಲ್ಲಾ ? ಆ ವಿಶೇಷವಾವುದು ?

ಉ—ಸರಿಸರಿ. ಚೆನ್ನಾಯ್ತು. ನೀನು ಈಗ ಈ ವಿಷಯವನ್ನು ಗ್ರಹಿಸಿದುದಕ್ಕೆ ಗುರುತಾಗಿ ಒಳ್ಳೆಯ ಪ್ರಶ್ನೆಮಾಡಿದೆಯಯ್ಯಾ !! ರಾಮಾಯಣವನ್ನೆಲ್ಲಾ ಕೇಳಿದಮೇಲೆ ಸೀತೆ ರಾಮಗೇ ಪತ್ನಿಯೋ ? ಎಂಬಂತಾಯ್ತು. ಮೈ ಪುಷ್ಟಿಯಾಗಲೆಂದು ಊಟವನ್ನು ಹೆಚ್ಚಿಸಿದಷ್ಟು ಜೀರ್ಣಿಸದೆ ರೋಗದಿಂದ ಮೈ ಬಡವಾಗುವುದೇ ಸಹಜವು. ಶಾಸ್ತ್ರವಿಷಯವು ತಿಳಿಯಲೆಂದು ಉಪನ್ಯಾಸ ಮಾಡಲು ಮೊದಲಿಗೆ ಮೋಸವೇಬಂಧಿತು.

ಅ—ಅದೇನು ನನ್ನ ಪ್ರಶ್ನೆ ಅಷ್ಟು ಹಾಸ್ಯಾಸ್ಪದವೆ ?

ಉ—ಮತ್ತೇನು ? ಸಮಷ್ಟಿ, ವ್ಯಷ್ಟಿ, ಸಾಮಾನ್ಯ, ವಿಶೇಷ, ಇವೆಲ್ಲಾ ತಿಳಿಯಿತು. "ಇಂದೇನು ವಿಶೇಷ, ಎಂಬುದು ಮಾತ್ರ ತಿಳಿಯಲಿಲ್ಲ" ಎಂದರೆ "ಆನೆಯ (ದೇಹ) ಆಕಾರವೆಲ್ಲವೂ ಬಾಗಿಲಿಂದ ಹೊರಗೆ ಬಂದಿತು, ಬಾಲ ವೊಂದುಮಾತ್ರ ಈಚೆಗೆ ಬಾರದೆ ಸಿಕ್ಕಿಕೊಂಡಿದೆ" ಎಂದಂತಾಗಲಿಲ್ಲವೆ?

ಅ—ಹಾಗಲ್ಲ ಸ್ವಾಮಿಾ ! ನನ್ನ ಅರ್ಥ. ಲೋಕರೂಢಿಯು ಮನೆಯಲ್ಲಿ ಶ್ರಾದ್ಧ, ಪಕ್ಷ, ಮುಂತಾದುದಕ್ಕೆ ಮಾತ್ರವೇ ವಿಶೇಷವೆಂಬುದಾಗಿರುವುದ ರಿಂದ ಆ ರೂಢಿ ಹೇಗೆ ಬಂದಿತೆಂದು ?

ಉ—ಅಯ್ಯಾ! ಆ ರೂಢಿ ಎಂಬುದು ಪಾಮರರರೂಢಿ, ಪಂಡಿತರೂಢಿ, ಎಂದು ಎರಡು ವಿಧವುಂಟು. ಪಾಮರರು ಹೆಂಗಸರು ಹುಡುಗರು ಗತಾನುಗ ತಿಕನ್ಯಾಯವನ್ನನುಸರಿಸಿ ಹೇತುಫಲವಿಚಾರವಿಲ್ಲದೆ ಗವಿಯ ಪ್ರತಿಧ್ವನಿಯಂತೆ ಒಬ್ಬರೆಂದವೇರೆಗೆಂಬುವುದು, ಒಬ್ಬರು ಮಾಡಿದಂತೆ ಮಾಡುವುದು, ಅಣಕಿ ಸುವುದು, ಅದರಿಂದ ಇಷ್ಟಸುಖವನ್ನು ತಪ್ಪಿಸಿಕೊಂಡು ಅನಿಷ್ಟದುಃಖವನ್ನು ಅನುಭವಿಸುವುದು, ಸಾಜವು, ಅವಸರ, ಅವಾಂತರ, ತಾತ, ತಿಥಿ, ಸಮಾಚಾರ, ವ್ಯಾಪಾರ, ಯಜ್ಞ, ಹಬ್ಬ, ಇತ್ಯಾದಿಗಳ ದಿಟವಾದ ಅರ್ಥಜ್ಞಾನವಿಲ್ಲದೆ ಯೇ ಪದಗಳನ್ನು ಪ್ರಯೋಗಿಸುವರು. ಅದರಿಂದಲೇ ಪಾಮರರು ಮೂಢ ರು. ಓದಿ ಪಂಡಿತರೆನಿಸಿಕೊಂಡವರು ಹಾಗಲ್ಲದೆ ವಿಮರ್ಶೆಯಿಂದ ಮನೋ ವಾಕ್ಕಾಯಗಳ ದೋಷಗಳನ್ನು ತೊಲಗಿಸಿಕೊಂಡು ಸುಖಿಸುವರು.

ಪ್ರಕೃತ ನೀವು ವಿಚಾರಪರರಾದುದರಿಂದ ತಿಳಿಯುತ್ತಬಂದಹಾಗೆಲ್ಲಾ ಮನೋವಾಕ್ಕಾಯಕರ್ಮಗಳನ್ನು ತಿದ್ದಿಕೊಳ್ಳಿರಿ. ಇನ್ನೊಂದಾವೃತ್ತಿ ಆ ಸಾಮಾನ್ಯವಿಶೇಷಧರ್ಮಶಬ್ದಾರ್ಥವನ್ನು ಹೇಳುವೆನು. ಸಾಮಾನ್ಯ=ಸಾಧಾ ರಣ=ಭೇದಜ್ಞಾನವೇ ತೋರಬಾರದೆ ಎರಡಿಲ್ಲದಿರುವುದು. ಎಂದರೆ ಎಲ್ಲಾ ಕಾಲದಲ್ಲಿಯೂ, ಎಲ್ಲಾದೇಶದಲ್ಲಿಯೂ, ಎಲ್ಲಾ ಅವಸ್ಥೆಗಳಲ್ಲಿಯೂ ಬಿಡದೆ ವಸ್ತುವನ್ನು ಅನುಗತವಾಗಿ=ಅನುಸರಿಸಿ ಏಕವಾಗಿ ತೋರಬರುವುದೆಲ್ಲವೂ ಸಾಮಾನ್ಯವು.

ವಿಶೇಷ—ಭೇದ, ನಿತ್ಯವು ಕಾಲದ್ವಯಭೋಜನವೂ ಸಾಮಾನ್ಯವಾದರೆ ಈದಿನ ಪರ್ವ—ಏಕವಾರಾಶನವೇ ವಿಶೇಷವು. ನಿತ್ಯವೂ ಸಾಮಾನ್ಯವಾಗಿ

ದೇವಯಜ್ಞ ಹವ್ಯಕರ್ಮವನ್ನು ನಡೆಯಿಸುತ್ತಿದ್ದು ಅಮಾವಾಸ್ಯೆಯಲ್ಲಿ "ಕವ್ಯ" ಪಿತೃದೇವತಾ ಪ್ರೀತ್ಯರ್ಥವಾಗಿ ಮಾಡುವ ಪಿಂಡ ತರ್ಪಣಾದಿಗಳು ವಿಶೇಷಕರ್ಮವು. ಹೀಗೆಯೇ ನಿತ್ಯವು ಮನೆಯ ಜನದ ಮಟ್ಟಿಗೆ ಅಡಿಗೆ ಊಟ ಸಾಮಾನ್ಯವು. ಆನಿತ್ಯದ ಕಟ್ಟಳೆಗೆ ಮೀರಿರುವುದು ಎಂದರೆ ಬೀಗರು ನೆಂಟರು ಬಂದಾಗ ಅಧಿಕವಾದ ಅಡಿಗೆಯೂಟದ ಭೇದವೇ ವಿಶೇಷವು. ನಿತ್ಯಭೋಜನವು ಸಾಮಾನ್ಯವಾದರೆ ಏಕಾದಶೀದಿನದಲ್ಲಿ ಭೋಜನಾಭಾವವೇ ವಿಶೇಷವು. ಎಲ್ಲರಿಗೂ ಫಲತಾಂಬೂಲಗಳನ್ನು ಕೊಡುವುದು ಸಾಮಾನ್ಯವಾದರೆ ವೈದಿಕರಿಗೆ ಮಾತ್ರ ದಕ್ಷಿಣಾಸಹಿತವಾಗಿ ಕೊಡುವುದೇ ವಿಶೇಷವು. ಅದರಲ್ಲಿಯೂ ಮಠದ ಸರ್ವಾಧಿಕಾರಿಗೆ ದ್ವಿಗುಣವಾಗಿ ಕೊಡುವುದು ವಿಶೇಷದಲ್ಲಿ ವಿಶೇಷವು.

ಅ—ಸರಿ ಸರಿ. ತಿಳಿಯಿತು ಸ್ವಾಮಿ. ಹಿಂದೆ ಈ ಸಾಮಾನ್ಯ ವಿಶೇಷ ಧರ್ಮ ಸ್ವರೂಪವನ್ನು ವಿವರಿಸಿರುವಿರಷ್ಟೆ? ಆ ಸಂದರ್ಭದಲ್ಲಿ ನಾವೇ ಬೇರೇ ಪ್ರಶ್ನೆಮಾಡಲು ಇಷ್ಟು ವಿಷಯಗಳು ತಿಳಿಯಬಂದುವು. ಆದರೆ ಈ ವಿಶೇಷ ಧರ್ಮಗಳನ್ನೇ ೧೨ ಗುಂಪುಗಳಾಗಿ ಮಾಡಿ ಹೇಳಿದ್ದಿರಿ. ಅದರ ವಿವರಣವನ್ನು ಮಾತ್ರ ತಿಳಿಸಲಿಲ್ಲ. ಆದರಿಂದ ಈಗ ಆ ೧೨ ಬಗೆಯ ವಿಶೇಷಧರ್ಮಗಳನ್ನು ಸಂಕ್ಷೇಪವಾಗಿ ತಿಳಿಸಬೇಕೆಂದು ಬೇಡುವೆವು.

ಉ—ಆಗಲಿ. ನಾನು ಏನೇನು ಆ ವಿಶೇಷಧರ್ಮಗಳನ್ನು ವಿಂಗಡಿಸಿ ಹೇಳಿದ್ದೆನೋ ಅವರ ಹೆಸರನ್ನಾದರೂ ಒಟ್ಟಿಗೆ ಹೇಳಿರಿ. ಬಳಿಕ ಅದರ ವಿವರಣವನ್ನು ಹೇಳುವೆನು.

ಅ—ಆಹ! ನಾನು ಹೇಳುವೆನು—"೧ ಲೌಕಿಕವೈದಿಕ, ೨ ಪ್ರವೃತ್ತಿನಿವೃತ್ತಿ, ೩ ಸ್ಥೂಲ ಸೂಕ್ಷ್ಮ, ೪ ಪುರುಷ ಸ್ತ್ರೀ, ೫ ವರ್ಣಾಶ್ರಮ, ೬ ನಿತ್ಯ ನೈಮಿತ್ತಿಕ, ೭ ಗುಣದ್ರವ್ಯ, ೮ ದೇಶ ಕಾಲ, ೯ ಶರೀರವಯೋವಸ್ಥಾ, ೧೦ ಜಾತಿ ಕುಲ, ೧೧ ಮತ ಸಮಾಜ, ೧೨ ಆಪನ್ಮೋಕ್ಷಧರ್ಮ" ಎಂದು

ಉ—ಸರಿ. ಕೇಳಿರಿ:—ಲೌಕಿಕ ಎಂದರೆ ಲೋಕವ್ಯವಹಾರವನ್ನು ಬಲ್ಲವನು, ಜನರಲ್ಲಿ ಪ್ರಸಿದ್ಧಿಪಡೆದವನು; ಅಹಿಂಸಾ ಭೂತದಯಾ ಯಜ್ಞದಾ

ನಾದಿಗಳು ಇವನ ಸಾಮಾನ್ಯಧರ್ಮಗಳು. ಇನ್ನೂ ರಾಜದ್ಯೈವಭಜನ, ಜನಸಂಗ್ರಹಣ, ಅರ್ಥಸಿದ್ಧೀಚ್ಛೆಯಿಂದ ನಿರಂತರ ಕರ್ಮಾಚರಣ, ಧರ್ಮವಿರೋಧವಲ್ಲದ ಅರ್ಥಕಾಮನಿಷೇವಣ, ಸರ್ವೋಪಾಯದಿಂದಲೂ ಶಾರೀರ ಮಾನಸ ಸುಖಸಂಸಾಧನವೇ ಮುಖ್ಯಧರ್ಮವು. ಈ ಲೌಕಿಕಧರ್ಮಗಳೆಲ್ಲವು ಸಂಗ್ರಹಿಸಲ್ಪಟ್ಟು ಸದ್ವೃತ್ತರತ್ನಾವಳಿ ಎಂಬ ಗ್ರಂಥದ ಸದಾಚಾರಸರದಲ್ಲಿ ಪ್ರಕಟಿತವಾಗಿದೆ ; ನೋಡಿರಿ.

ಅ–ಸರಿ. ವೈದಿಕಧರ್ಮಗಳು ಆವುವು ?

ಉ–ವೈದಿಕಧರ್ಮಗಳು :–ವೇದಾಧ್ಯಯನ ವೇದೋಕ್ತಕರ್ಮಾನುಷ್ಠಾನಗಳು. ಧರ್ಮೋದ್ದೇಶ್ಯಕವಾದ ಯಜ್ಞದಾನ ತಪಸ್ಸುಗಳು, ಸತ್ಯಾದಿಪೂರ್ವೋಕ್ತ ಧರ್ಮಗಳು, ಗುರುದೇವಸೇವೆ, ಆಮುಷ್ಮಿಕ ವಿರೋಧವಿಲ್ಲದ ಸುಖಸೇವನೆ, ಮುಂತಾದುದು ಸದ್ವೃತ್ತರತ್ನಾವಳಿಯ ಆರ್ಯಧರ್ಮಸಾರತರಳದಲ್ಲಿ ಬ್ರಾಹ್ಮಣ್ಯ ಎಂಬ ಭಾಗದಲ್ಲಿ ವಿವರಿಸಲ್ಪಟ್ಟಿದೆ. ನೋಡಿರಿ.

ಅ–ನೋಡುವ. ೨ ಪ್ರವೃತ್ತಿಧರ್ಮ ನಿವೃತ್ತಿಧರ್ಮಗಳಾವುವು ?

ಉ–ಪ್ರವೃತ್ತಿಧರ್ಮ:–ಇಹಪರಗಳಲ್ಲಿ ಸುಖ ಫಲಾರ್ಥವಾಗಿ ಧರ್ಮಾರ್ಥಕಾಮಗಳಲ್ಲಿ ಪ್ರವರ್ತಿಸುವುದು. ದಾನಯಜ್ಞಾದ್ಯರ್ಥವಾಗಿಯು ಸ್ವಪರಸುಖಾರ್ಥವಾಗಿಯು ಸದಾ ಪ್ರಯತ್ನಿಸುತ್ತಿರುವುದು.

ನಿವೃತ್ತಿಧರ್ಮ–ಜ್ಞಾನಪೂರ್ವಕವಾಗಿ ಇಹಪರಸುಖಗಳನ್ನು ಆಶಿಸದಿರುವುದು. ಐಹಿಕವಿಷಯಗಳಲ್ಲಿ ದುಃಖದರ್ಶನದಿಂದ ವಿರಕ್ತಿಹೊಂದುವುದು. ಭಗವತ್ಪ್ರೀತ್ಯರ್ಥವಾಗಿಯೆ ನಿಷ್ಕಾಮವಾದ ಯಜ್ಞದಾನತಪಃಕರ್ಮಾಚರಣದಲ್ಲಿ ಸದಾಸಕ್ತಿ. ಆ ನಿಷ್ಕಾಮಕರ್ಮಾಭ್ಯಾಸದಿಂದ ಗೃಹಾರಾಮಾದಿಗಳಲ್ಲಿಯೂ ಸ್ವಶರೀರದಲ್ಲಿಯೂ ಅಭಿಮಾನವನ್ನು ಬಿಟ್ಟು ಮೋಕ್ಷಸಾಧನೇಚ್ಛೆಯಿಂದ ಸನ್ಯಾಸಧರ್ಮಾಚರಣೆ ಮಾಡುವುದು.

ಅ–೩ ಸ್ಥೂಲಧರ್ಮ ಸೂಕ್ಷ್ಮಧರ್ಮಗಳಾವುವು ?

ಉ––ಸ್ಥೂಲಧರ್ಮ:––ಮಂದಮತಿಗಳಿಗೂ ಗೋಚರವಾಗುವುದು. ಸುಳ್ಳಾಡಬಾರದು, ಇತರರನ್ನು ಹಿಂಸಿಸಬಾರದು, ಕದಿಯಬಾರದೆಂಬುವು,

ವಿವಾಹಾದಿಗಳು, ದೇಹಗೇಹಶುದ್ಧಿ, ಭಾರ್ಯಾಪುತ್ರಾದಿಭರ್ತ್ರ್ಯವ್ಯಭರಣ, ಪ್ರಾಣಿ ಸಂತರ್ಪಣಾದಿ ಪರೋಪಕಾರಗಳು, ದಾನಯಜ್ಞಗಳು.

ಸೂಕ್ಷ್ಮಧರ್ಮ:—ವಿದ್ವಾಂಸರಿಗೆ ಮಾತ್ರವೇ ನ್ಯಾಯ್ಯವೆಂದು ಕರ್ತವ್ಯ ವೆಂದು ತೋರುವುದು. ಉದಾ—ಭಾ | ಶಾಂತಿ ೧೬೫ ಅಧ್ಯಾಯದಲ್ಲಿ—

"ಪಂಚಾನೃತಾನ್ಯಾಹುರಪಾತಕಾನಿ ;

"ಬ್ರುವಂಸ್ತೇನ ಇತಿ ಸ್ತೇನಂ ತಾವತ್ಪ್ರಾಪ್ನೋತಿ ಕಿಲ್ಬಿಷಂ"

"ಆತತಾಯಿನಮೇವ್ಯೇನಂ ಹನ್ಯಾದೇವಾವಿಚಾರಯನ್"

"ಸ್ತೇಯಂ ಕುರ್ವಂಸ್ತ್ವ ಗುರ್ವರ್ಥಮಾಪತ್ಸು ನನಿಷಿಧ್ಯತೇ" ೩೪ ಅಧ್ಯಾಯ.

(ಅಯುದ್ಧ ಸುಳ್ಳು ಮಾತ್ರ ಪಾಪವಲ್ಲ; ಕಳ್ಳನನ್ನು ಕಳ್ಳನೆಂದು ಹೇಳುವನು ಪಾಪಿ; ಕೊಲ್ಲುವುದಕ್ಕೆ ಬರುವನನ್ನು ವಿಚಾರಿಸದೆ ಕೊಲ್ಲಲೇ ಬೇಕು; ಗುರುಗಳ ನಿಮಿತ್ತವಾಗಿ ಆಪತ್ಕಾಲದಲ್ಲಿ ಕಳ್ಳತನ ಮಾಡುವಗೆ ದೋಷವಿಲ್ಲ ;) ಎಂದು.

ಇನ್ನೂ ತಪಸ್ಸು, ಯೋಗ, ಆತ್ಮಜ್ಞಾನ, ಧ್ಯಾನ, ಮಂತ್ರಜಪೋ ಪಸ್ಥಾನಾದಿಗಳು, ಗೌರವ ಲಾಘವ ವಿಮರ್ಶೆ, ಜ್ಯೈಷ್ಠ್ಯಕಾನಿಷ್ಠ್ಯಾದಿತಾರ ತಮ್ಯಜ್ಞಾನಾದಿಗಳು. ಮಾನಸಪ್ರತ್ಯಕ್ಷವಿಷಯವಾದ ತತ್ತ್ವಾಂಶಗಳು. ಇವೆಲ್ಲಾ ಸೂಕ್ಷ್ಮಧರ್ಮಗಳು.

ಅ—೪ ಪುರುಷಧರ್ಮ ಸ್ತ್ರೀಧರ್ಮಗಳಾವುವು ?

ಉ—ಪುರುಷಧರ್ಮ :—ದಾರಪುತ್ರಾದಿ ಭರ್ತ್ರ್ಯವ್ಯ ಬಂಧುವರ್ಗವನ್ನು ನ್ಯಾಯ್ಯಮಾರ್ಗದಿಂದ ಪೋಷಿಸುವುದು. ಆಪನ್ನರನ್ನುದ್ಧರಿಸುವುದು. ಸಾಧು ವಿರೋಧಿಗಳಾದ ದುಷ್ಟರನ್ನು ನಿಗ್ರಹಿಸುವುದು. ಅಕ್ಲೇಶದಿಂದ ಧನಾರ್ಜನೆ, ವಿದ್ಯಾಧನೌದಾರ್ಯಧೈರ್ಯ ಶೌರ್ಯ ಗಾಂಭೀರ್ಯಾದಿಗಳಿಂದಕೂಡಿ ವಿನೀತನಾಗಿರು ವುದು. ಸತ್ತ್ವಶುದ್ಧಿಯಿಂದ ಸಂಸ್ಕೃತಿಕರ್ಮಬದ್ಧನಾಗಿಯೂ ನಿರ್ಲಿಪ್ತನು ನಿಃಸ್ಪೃಹನು ಎನಿಸಿಕೊಳ್ಳುವುದು.

ಸ್ತ್ರೀಧರ್ಮ:—ಪಾತಿವ್ರತ್ಯ, ಗುರುಗಳ ಶುಶ್ರೂಷೆ, ಶಿಶುಪೋಷಣೆ, ಗೃಹಸಂ ಸ್ಕಾರ, ಪಾಕಸರ್ವಹಣ, ಚಿತ್ರಶಿಲ್ಪವಿದ್ಯಾಸಂಗ್ರಹ, ಗೃಹಕೃತ್ಯನಿರತತ್ವ,

ಸದಾನುರಾಗದಿಂದ ಸಂತಾನ ಸಂಪತ್ತು ಮುಂತಾದ ಸಂಸಾರಾಭಿವೃದ್ಧಿ ಮಾಡುವ ಕಾರ್ಯವೆಲ್ಲವು ಸ್ತ್ರೀಧರ್ಮವೇ. ಇನ್ನೇನು ಹೇಳಬೇಕು?

ಅ—೫ ವರ್ಣಾಶ್ರಮಧರ್ಮಗಳನ್ನು ಹೇಳಬೇಕು

ಉ—ಸರಿ. ವರ್ಣಧರ್ಮ:-ವರ್ಣಗಳು ೪. ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ ಎಂದು. ಅದರಲ್ಲಿ ಬ್ರಾಹ್ಮಣಗೆ—ವೇದಾಧ್ಯಯನಾದಿ ಷಟ್ಕರ್ಮಗಳು, ಶಮ ದಮ ಶೌಚಾಚಾರಗಳು ವೈದಿಕ ಸಾತ್ವಿಕ ಯಜ್ಞದಾನ ತಪಸ್ಸುಗಳು.

ಕ್ಷತ್ರಿಯಗೆ—ಅಧ್ಯಯನ ಯಜನದಾನಗಳು, ಶೌರ್ಯೌದಾರ್ಯತೇಜಸ್ಸುಗಳು, ದುಷ್ಟನಿಗ್ರಹ ಶಿಷ್ಟಪರಿಪಾಲನ ಪೂರ್ವಕವಾಗಿ ನ್ಯಾಯದಿಂದ ಪ್ರಜಾ ಪಾಲನೆ, ಐಶ್ವರ್ಯ, ಮಂತ್ರಾಸ್ತ್ರಸಿದ್ಧಿ ಪಡೆದು ಯುದ್ಧದಲ್ಲಿ ಹೆದರದಿರುವುದು, ದೈವ ಗುರು ಭಕ್ತಿ ಮುಂತಾದುದು.

ವೈಶ್ಯಗೆ—ಕೃಷಿ, ವಾಣಿಜ್ಯ, ಪಶುಪಾಲನೆಗಳಿಂದ ಧನಾರ್ಜನೆ, ಅದನ್ನು ದಾನಯಜ್ಞಗಳಲ್ಲಿ ವಿನಿಯೋಗಿಸುವುದು, ಸ್ವೋತ್ತಮರ ಸೇವೆ.

ಶೂದ್ರಗೆ—ಸತ್ಯಾದಿಸಾಮಾನ್ಯಧರ್ಮಾಚರಣೆ ಮತ್ತು ಸ್ವೋತ್ತಮರ ಪರಿಚರ್ಯೆ, ಮಂತ್ರರಹಿತವಾದ ದೇವಪಿತೃಕರ್ಮತಂತ್ರಾನುಷ್ಠಾನವು—ವಿಶೇಷವು.

ಆಶ್ರಮಧರ್ಮ:—ಆಶ್ರಮಗಳು ನಾಲ್ಕು—ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸ, ಎಂದು. ಅದರಲ್ಲಿ—ಬ್ರಹ್ಮಚಾರಿಗೆ= ಉಪನೀತನಾದವಗೆ ಶೌಚಸ್ನಾನಾದಿ ಸದಾಚಾರಾಭ್ಯಾಸ, ತ್ರಿಕಾಲ ಸಂಧ್ಯಾವಂದನೆ, ಅಗ್ನಿಕಾರ್ಯ, ಆಸನ ಪ್ರಾಣಾಯಾಮಾಭ್ಯಾಸ, ತ್ರಿಕರಣಶಿಕ್ಷಣ, ಅಧ್ಯಯನ, ಗುರುಶುಶ್ರೂಷೆ, ಇಂದ್ರಿಯನಿರೋಧಾಭ್ಯಾಸವು ಮುಖ್ಯಧರ್ಮವು.

ಗುರುಗಳಾಜ್ಞಾನುಸಾರವಾಗಿ ಮದುವೆಯಾದ ಗೃಹಸ್ಥಗೆ—ಪಂಚಮಹಾಯಜ್ಞ, ದರ್ಶಪೂರ್ಣಮಾಸೇಷ್ಟ್ಯಾದಿಗಳು, ಅಕ್ಲೇಶದಿಂದ ಧನಾರ್ಜನೆ, ಗೃಹೋಪಕರಣ ಸಂಪಾದನೆ, ಶಿಶುವೃದ್ಧಾದಿ ಕುಟುಂಬಪಾಲನೆ, ಸರ್ವಪ್ರಾಣಿಗಳಲ್ಲಿಯು ಬಂಧುಭಾವನೆ, ಸರ್ವಸಮತ್ವ ಸತ್ಯಕ್ಷಮಾದಿಗಳು, ಯಥೋಚಿತವಾಗಿ ವಿಷಯಸೇವನೆ. ಯಥಾರ್ಹವಾಗಿ ಯಜ್ಞ ದಾನ ತಪಃಕರ್ಮಾಭ್ಯಾಸವು ಮುಖ್ಯಧರ್ಮಗಳು.

ವಾನಪ್ರಸ್ಥಗೆ—ಇಂದ್ರಿಯವಿಷಯವಿರಾಗ, ಗೃಹತ್ಯಾಗ, ವನವಾಸ, ಶೌಚ, ತ್ರಿಷವಣಸ್ನಾನ, ಅನಗ್ನಿಪಕ್ವಾಹಾರ, ಶೀತೋಷ್ಣಸಹನಾಭ್ಯಾಸ, ರಾಜವಿದ್ಯಾ ರಾಜಯೋಗಾಭ್ಯಾಸ, ಶಾಂತಿ, ದಾಂತಿ, ಮುಂತಾದುದು ಮುಖ್ಯವು.

ಯತಿಗೆ—ವೈರಾಗ್ಯ, ಸರ್ವಭೂತಸಮತ್ವ, ಸತ್ತ್ವಶುದ್ಧಿ, ಶರೀರಶೋಷಣ ರೂಪತಪಸ್ಸು, ಭಿಕ್ಷಾಚರಣ, ಪ್ರಣವೋಪಾಸನಾದಿ ಯೋಗಾನುಷ್ಠಾನ ವಿಶೇ[ಷಗಳು.

ಅ—೬ ನಿತ್ಯನೈಮಿತ್ತಿಕ ಧರ್ಮಗಳೆಂದರೇನು?

ಉ—ನಿತ್ಯಧರ್ಮ:—ಯಾವಜ್ಜೀವವು ಬಿಡದೆ ನಡೆಯಿಸಬೇಕಾದ ಸಂಧ್ಯಾವಂದನ ಶ್ರಾದ್ಧಾದಿಗಳು. ಸ್ನಾನಶೌಚಾದಿ ಶಾರೀರ ನೈರ್ಮಲ್ಯ, ಸಾತ್ವಿಕಾಹಾರ ವಿಹಾರಾದಿಗಳು. ಇನ್ನು ಯಾವುದನ್ನು ಮಾಡದೆ ಬಿಡುವುದರಿಂದ ದೇಹೇಂದ್ರಿಯ ಪ್ರಾಣಮನೋಬುದ್ಧಿಗಳಿಗೆ ಪ್ರತ್ಯವಾಯವು (ಪಾಪಮಲದೋಷಗಳು) ಪ್ರಾಪ್ತವಾಗುವುದೋ ಅದೆಲ್ಲವು ನಿತ್ಯವು.

ನೈಮಿತ್ತಿಕಧರ್ಮ-ಅವರವರಿಗೆ ವಿಹಿತವಾದ ಧರ್ಮಗಳು ನಡೆಯದೆ ತಪ್ಪಿದರೆ ಮಾಡಬೇಕಾದ ಪ್ರಾಯಶ್ಚಿತ್ತರೂಪಕರ್ಮಗಳು, ಮತ್ತು ಗ್ರಹಣಾದಿಪರ್ವ ಕಾಲ ಪುಣ್ಯಕ್ಷೇತ್ರ ಗುರುಸಮಾಗಮಾದಿ ನಿಮಿತ್ತಗಳುಂಟಾದಾಗ ಮಾಡತಕ್ಕ ಹವ್ಯಕವ್ಯಗಳು, ದೇಹೇಂದ್ರಿಯ ಪ್ರಾಣಮನೋಧರ್ಮಗಳು ವ್ಯತ್ಯಸ್ತವಾದಾಗ ನಡೆಯಿಸುವ ಸ್ನಾನದಾನವ್ರತೋಪವಾಸನಕ್ತೈಕಭಕ್ತಾದಿಗಳು.

ಅ—೭ ಗುಣಧರ್ಮ ದ್ರವ್ಯಧರ್ಮಗಳಾವುವು?

ಉ—ಸಂಸ್ಕಾರವು ನೆರವೇರಿದ ಮೇಲೆ ನಡೆಯಿಸುವುದು ಗುಣಧರ್ಮ—ಉದಾ—ವಿಪ್ರನು ವ್ರತಿಯೆನಿಸಿದಮೇಲೆ ವಿಹಿತವಾದ ಕರ್ಮ ಮಾಡುವುದು ಎಂದರೆ ವಟುವಾದಮೇಲೆ ಆಸನಪ್ರಾಣಾಯಾಮಾಭ್ಯಾಸ, ಕ್ಷತ್ರಿಯನು ಪಟ್ಟಾಭಿಷಿಕ್ತನಾದಮೇಲೆ ಪ್ರಜಾಪಾಲನೆ. ಹೀಗೆಯೇ ಪ್ರಸವಿಸಿದ ಸ್ತ್ರೀಗೆ ಶಿಶುಸಂರಕ್ಷಣೆ, ಸಂಪನ್ನನಿಗೆ ವಿಪನ್ನರಕ್ಷಣೆ, ಇತ್ಯಾದಿಗಳು.

ದ್ರವ್ಯಧರ್ಮ :-" ಗುರುಃ ಸ್ನಿಗ್ಧಶ್ಚ ತೀಕ್ಷ್ಣಶ್ಚ ರೂಕ್ಷೋ ಲಘುರಿತಿಕ್ರಮಾತ್। ಧರಾಂಬುವಹ್ನಿಪವನವ್ಯೋಮ್ನಾಂ ಪ್ರಾಯೋಗುಣಾಃ ಸ್ಮೃತಾಃ ॥

ಶಾ-ಸಂ||" ಎಂದಿರುವುದರಿಂದ ಭೂಜಲತೇಜೋವಾಯ್ವಾಕಾಶಗಳಿಗೆ ಕ್ರಮವಾಗಿ ಭಾರ, ಸ್ನೇಹ (ಜಿಡ್ಡು), ತೀಕ್ಷ್ಣ, ರೂಕ್ಷ, ಲಘು, ಇವು ನಿಜಧರ್ಮಗಳು. ಹಾಗೆಯೇ ತಾಮ್ರಾದಿ ಲೋಹಗಳು ಆಮ್ಲಾದಿಗಳಿಂದ ಶುದ್ಧವಾಗುವುದು. ದೇಹಗೇಹಾರಾಮಾದಿದ್ರವ್ಯಗಳು ಕಾಲದಿಂದ ಪರಿಣತಗಳಾಗುತ್ತ, ಶೌಚಾದಿಸಂಸ್ಕಾರಗಳಿಂದ ಶುದ್ಧಗಳಾಗುವುದು ಕೂಡ ದ್ರವ್ಯಧರ್ಮವು.

ಅ—೮ ದೇಶಕಾಲ ಧರ್ಮಗಳು ಆವುವು ?

ಉ—ದೇಶಧರ್ಮ—ಪುಣ್ಯಕ್ಷೇತ್ರದಲ್ಲಿ ಸ್ನಾನದಾನಾದಿಗಳು, ಪಟ್ಟಣದಲ್ಲಿ ಆಚಾರಸಂಕೋಚ, ಮಾರ್ಗಪ್ರಯಾಣದಲ್ಲಿ ಅನಾಚಾರವು. ಉತ್ತರದೇಶದಲ್ಲಿ-ಕುದುರೆ ಮೊದಲಾದುವಂ ಮಾರುವುದು, ಸಮುದ್ರಯಾತ್ರೆ, ಕಂಬಳವಿಕ್ರಯ, ಆಯುಧಗ್ರಹಣ, ಧೂಮಪಾನಾದಿಗಳು. ದಕ್ಷಿಣದೇಶದಲ್ಲಿ—ಹೆಂಗಳು ಮಕ್ಕಳೊಡನೆ ಕುಳಿತು ಊಟಮಾಡುವುದು, ತಂಗುಳು ತಿನ್ನುವುದು, ಸೋದರಮಾವ ಸೋದರತ್ತೆ ಇವರ ಮಕ್ಕಳನ್ನು ಮದುವೆಯಾಗುವುದು. ಶೀತದೇಶದಲ್ಲಿ ಕಂಬಳ ದಾನಧಾರಣಾದಿಗಳು, ಉಷ್ಣದೇಶದಲ್ಲಿ ಪರ್ಯುಷಿತಾನ್ನಪಾನಗಳು, ಶೀತೋಪಚಾರಗಳು ಮುಂತಾದುವು.

ಕಾಲಧರ್ಮ—ಹೇಮಂತದಲ್ಲಿ ಅತಿಶೀತ, ಗ್ರೀಷ್ಮದಲ್ಲಿ ಅತ್ಯುಷ್ಣ, ಶರದ್ವಸಂತಗಳಲ್ಲಿ ಸಮಶೀತೋಷ್ಣಗಳು. ಶೀತಕಾಲದಲ್ಲಿ ವಸ್ತ್ರದೀಪಾದಿದಾನವು. ಉಷ್ಣಕಾಲದಲ್ಲಿ ಛತ್ರವ್ಯಜನಪಾನಪಾತ್ರಾದಿದಾನವು. ಭೋಜನಕಾಲದಲ್ಲಿ ಬಂದವರಿಗೆ ಕಬಳದಾನ, ನಿದ್ರಾಕಾಲದಲ್ಲಿ ಶಯ್ಯಾದಿದಾನಗಳು.

ಅ—೯ ಶರೀರವಯೋವಸ್ಥಾಧರ್ಮಗಳು ಆವುವು ?

ಉ—ಶರೀರಧರ್ಮ—ಸ್ಥೂಲನಿಗೆ—ಸಂವಾಹನ, ಅಭ್ಯಂಗ, ಉಪವಾಸ, ಅಪತರ್ಪಣ, ಬಿಸಿಲು, ಬೆಂಕಿ, ಬಿಸಿನೀರುಗಳಿಂದ ಉಪಚರಿಸುವುದು.

ಕೃಶಗೆ—ಸಂತರ್ಪಣವಾದ ಅನ್ನಪಾನಾದಿಗಳಿಂದಲೂ ಉಪಶಮ ಸ್ನಾನ ನಿದ್ರಾದಿಗಳಿಂದಲೂ ಉಪಚಾರಮಾಡುವುದು. ಅದರಲ್ಲಿ ವಾತಲಗೆ ವಸ್ತಿಕರ್ಮ, ಪಿತ್ತಲಗೆ ವಿರೇಚನ, ಶ್ಲೇಷ್ಮಲಗೆ ವಮನ, ಗುರುವ್ಯಾಧಿತಗೆ ಕಾಲಪ್ರಾಪ್ತಹವ್ಯಕವ್ಯಕರ್ಮಗಳಲ್ಲಿ ಮುಖ್ಯ ಕಲ್ಪತ್ಯಾಗ, ಅಥವಾ ಅನ್ಯರಿಂದ ಮಾಡಿ

ಸುವುದು: ಸ್ವಸ್ಥನಾದ ಶಕ್ತನಿಗೆ ಮಾತ್ರ ಮುಖ್ಯಕಲ್ಪಗಳನ್ನು ಬಿಡದೆ ನಡೆಯಿಸುವುದು.

ವಯೋಧರ್ಮ-ಬಾಲಗೆ ಆಟಪಾಟ, ಚಾಂಚಲ್ಯಾದಿಗಳು, ಮುಗ್ಧತೆ, ವೃದ್ಧರ ಸೇವೆ, ಶೌಚಾಚಾರಾಭ್ಯಾಸ, ವಿದ್ಯಾಗ್ರಹಣಾದಿಗಳು

ಪ್ರಾಯದವಗೆ—ಧನಾರ್ಜನ ದಾರಗ್ರಹಣ (ಮದುವೆಯಾಗುವುದು) ಭರ್ತವ್ಯಭರಣ ವಿಪನ್ನರಕ್ಷಣಾದಿಗಳು.

ವೃದ್ಧಗೆ-ಪರಲೋಕಚಿಂತೆ, ವಿರಕ್ತಿ, ಶಮದಮಾದಿಗಳು, ಹಿತೋಪದೇಶ ಪೂರ್ವಕವಾದ ಶಿಷ್ಯಶಿಕ್ಷಣಾದಿಗಳು.

ಅವಸ್ಥಾಧರ್ಮ-ಜಾಗ್ರದ್ದಶೆಯಲ್ಲಿ ಪ್ರಮಾದಬಾರದಂತೆ ಯುಕ್ತಕರ್ಮ ಮಾಡುತ್ತ ಪರರನ್ನು ಉಪಕರಿಸುವುದು. ಸ್ವಪ್ನಾವಸ್ಥೆಯಲ್ಲಿ ಕನವರಿಸುವುದು, ನಿದ್ರಾಮೂರ್ಛಾವಸ್ಥೆಯಲ್ಲಿ ನಿಶ್ಚೇಷ್ಟನಾಗಿಯು ನಗ್ನನಾಗಿಯು ಇರುವುದು. ಬಡತನದಲ್ಲಿ ಬೇಡುವುದು. ಭಾಗ್ಯಬಂದಾಗ ಕೊಡುವುದು.

ಅ—೧೦ ಜಾತಿಕುಲಧರ್ಮಗಳು, ಆವುವು?

ಉ—ಜಾತಿಧರ್ಮ—ಉತ್ತಮನು ನೈಚ್ಯವನ್ನು ಬಯಸದೆ ಉತ್ತಮೋತ್ತಮಸ್ಥಿತಿಗೆ ಬರಲೆಳಸುವುದು, ಯತ್ನಿಸುವುದು; ಇನ್ನು ನೀಚನು ಉತ್ತಮ ಜಾತಿಗೆ ಸೇರಲು ಯತ್ನಿಸುವುದು, ಬುದ್ಧಿ ಇಲ್ಲದ ಜಡಜಾತಿ ತಿರ್ಯಗ್ಜಾತಿಗೂ, ತಿರ್ಯಗ್ಜಾತಿ ನರಜಾತಿಗೂ, ನರನು ಪಿತೃತ್ವಕ್ಕೆ, ಪಿತೃಗಳು ದೇವತ್ವಕ್ಕೆ, ದೇವತೆಗಳು ದೇವದೇವತ್ವಕ್ಕೂ ಬರುತ್ತ ಇರುವುದು ಜಾತಿಧರ್ಮವು.

ಕುಲಧರ್ಮ—ಪಿತೃಪಿತಾಮಹಾದಿಗಳಿಂದ ಬಂದ ಶುದ್ಧ ಸಂಪ್ರದಾಯಾಚಾರಗಳನ್ನು ಬಿಡದೆ ಅನುಷ್ಠಿಸುವುದು. ಮತ್ತು ಕುಲನಾಶಕವಾದ ಕುವಿವಾಹ, ದೇವಬ್ರಹ್ಮವಿತ್ತಾಪಹರಣ, ನ್ಯಾಸಾಪಹರಣ (ಎಂದರೆ ನಂಬುಗೆಯಿಂದ ಪರರು ತನ್ನಲ್ಲಿರಿಸಿದ್ದ ದ್ರವ್ಯವನ್ನು ತಾನೆ ದಕ್ಕಿಸಿಕೊಳ್ಳುವುದು.) ವೇದಧರ್ಮಾತಿಕ್ರಮಣ, ಸ್ತೋತ್ತಮರಾದ ಸಾಧುಗಳ ನಿಂದೆ ಇಂತಹ ಕಾರ್ಯಗಳನ್ನು ಮಾಡದಿರುವುದು. ಹೀಗೆಯೇ ಕುಲೀನರಾದ ಬಂಧು ಬಾಂಧವ ಮಿತ್ರಾದಿಗಳನ್ನು ಉಪಚರಿಸುವುದು.

ಅ—೧೧ ಮತಧರ್ಮಸಮಾಜಧರ್ಮಗಳು ಆವುವು ?

ಉ—ವೈಷ್ಣವಾದಿಮತಧರ್ಮ—ವಿಷ್ಣುಭಕ್ತನು ತಾನು ಮಾಡುವ ಸರ್ವಕರ್ಮಗಳನ್ನು ವಿಷ್ಣುಪ್ರೀತ್ಯರ್ಥವಾಗಿಯೂ, ಶಿವಭಕ್ತನು ಶಿವಪ್ರೀತ್ಯರ್ಥವಾಗಿಯೂ ನಡೆಯಿಸುತ್ತ ಆ ಕರ್ಮಫಲವನ್ನು ತತ್ತದ್ದೇವತಾರ್ಪಣವನ್ನು ಮಾಡುವುದು. ಹೀಗೆ ಆ ಯಾ ಮತಸಂಪ್ರದಾಯಗಳನ್ನು ಬಿಡದೆ ಅನುಸರಿಸುವುದು ಅವರವರಿಗೆ ಧರ್ಮವು.

ಸಮಾಜಧರ್ಮ—ಇದು ವಿದ್ಯಾ, ವಿತ್ತ, ವಯಸ್ಸು ಮೊದಲಾದ ವಿಷಯಗಳಲ್ಲಿ ಸಮಾನಧರ್ಮವುಳ್ಳವರ ಸೇರಿಕೆಯು ಸಮಾಜವೆನಿಸುವುದು. ಅದರಲ್ಲಿ ಯಥಾಯೋಗ್ಯವಾಗಿ ಸಮಯಗಳನ್ನೇರ್ಪಡಿಸಿಕೊಂಡ ಮೇರೆಗೆ ಅನ್ಯೋನ್ಯಾನುಕೂಲವಾಗಿ ಪ್ರತಿಜ್ಞಾತಾರ್ಥವನ್ನು ನಿರ್ವಹಿಸುವ ದೀಕ್ಷೆಗೆ ಸೇರಿ ಇರುವುದು.

ಅ—೧೨ ಆಪದ್ಧರ್ಮ ಮೋಕ್ಷಧರ್ಮಗಳು ಆವುವು ?

ಉ—ಆಪದ್ಧರ್ಮ—ದುರ್ಭಿಕ್ಷದಲ್ಲಿ, ದೇಶಪ್ರವಾಸಾದಿಗಳಲ್ಲಿ, ನೀಚಾನ್ನದಿಂದಲಾದರೂ ಪ್ರಾಣರಕ್ಷಣಮಾಡುವುದು. ಎಲ್ಲವೂ ನಷ್ಟವಾಗುತ್ತಿದ್ದರೆ ಅರ್ಧ ಬಿಡುವುದು. ಆತ್ಮಸಂರಕ್ಷಣಾರ್ಥವಾಗಿ ಸರ್ವಸ್ವತ್ಯಾಗ ಮುಂತಾದುದು. ಇನ್ನೂ—

ಶ್ಲೋ || “ವೃದ್ಧೌ ಚ ಮಾತಾಪಿತರೌ ಸಾಧ್ವೀ ಭಾರ್ಯಾ ಸುತಃ ಶಿಶುಃ |
ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾ ಮನುರಬ್ರವೀತ್ ”

ತಂದೆತಾಯಿಗಳು ಮುದುಕರು, ಹೆಂಡತಿ ಹನಿಬದೆ, ಮಗನು ಮಗು; ಹೀಗಿರುವಾಗ ಅವರನ್ನು ಏನಾದರೂ ಮಾಡಿ ಸಾಕಬೇಕೆಂದು ಮನು ಹೇಳಿರುವನು.

ಮೋಕ್ಷಧರ್ಮ—ವಿಷಯಗಳ ಭೋಗತ್ಯಾಗ, ವೈರಾಗ್ಯ, ಉಪಶಾಂತಿ, ಸರ್ವಭೂತದಲ್ಲಿಯು ಸುಹೃತ್ತ್ವ, ಸರ್ವಸನ್ನ್ಯಾಸ, ಜ್ಞಾನಧ್ಯಾನಾದಿಗಳು.

ಅ—ಅದು ಸರಿ. ಹಿಂದೆ ಶರೀರಧರ್ಮವನ್ನು ಹೇಳುವಾಗ ವೈದ್ಯಕ್ಕೆ ಸೇರಿದ ಶೀತೋಷ್ಣೋಪಚಾರಾದಿಗಳನ್ನು ಧರ್ಮಶಾಸ್ತ್ರಕ್ಕೆ ಸೇರಿಸಿ ಹೇಳಿದಿರಲ್ಲವೆ ? ಅದು ಹೇಗೆ ಧರ್ಮವಾಯ್ತು?

ಉ—ಅಹುದಯ್ಯಾ! ಅದಿರುವುದೇ ಹಾಗೆ. ಈ ದೇಹಕ್ಕೆ ರೋಗಗಳು ಬಾರದಂತೆ ಜಾಗರೂಕನಾಗಿ ಶೌಚಸ್ನಾನಾದಿಕರ್ಮಾಚರಣೆಯನ್ನು ನಡೆಯಿಸುತ್ತ ಬರುವುದು ಹೇಗೆ ಧರ್ಮವೋ, ಪ್ರಮಾದದಿಂದ ರೋಗಬಂದಾಗ ಪ್ರಾಣಿಗೆ ಪ್ರತೀಕಾರೋಪಾಯವನ್ನು ಮಾಡುವುದೂ ಹಾಗೆ ಸ್ವಾಭಾವಿಕವೆನಿಸಿರುವ ಧರ್ಮವೇ ಅಲ್ಲವೆ? ವ್ಯಾಧಿಗ್ರಸ್ತಗೆ ಚಿಕಿತ್ಸೆ ಮಾಡದಿರುವುದು ಧರ್ಮವಾದೀತೆ? ಈ ಪ್ರಪಂಚದ ಸರ್ವ ಶುಭಾಶುಭಕರ್ಮಗಳಿಗೂ ಧರ್ಮಾಧರ್ಮಗಳೇ ಹೇತುವೆಂದಮೇಲೆ ಮುಖ್ಯವಾಗಿ ಶರೀರಕ್ಕೆ ಸಂಬಂಧಿಸಿದ ಆಯುರ್ವೇದವು ಧರ್ಮಮೂಲವಲ್ಲವೆ? ಇದರ ಮೇಲೆ ತತ್ತ್ವವಿಚಾರ ಮಾಡಿದರೆ ವೈದ್ಯಶಾಸ್ತ್ರ ಧರ್ಮಶಾಸ್ತ್ರಗಳೆರಡೂ ಪರಸ್ಪರ ಸ್ನೇಹವುಳ್ಳ ಯಮಳರಾದ ಅಣ್ಣತಮ್ಮಂದಿರ ಗೃಹಕೃತ್ಯದಂತೆಯೇ ಏಕಾಭಿಪ್ರಾಯವುಳ್ಳುವಾಗಿರುವುವು.

ದೇಹೇಂದ್ರಿಯಗಳು ನಿರ್ಮಲಗಳಾಗಿದ್ದ ಹೊರತು ಯಾವ ಶುಭಕಾರ್ಯವೂ, ಯಾವಧರ್ಮವೂ, ನಡೆಯುವುದಿಲ್ಲ, ಯಾವ ಸುಖವೂ ದೊರೆಯುವುದೂ ಇಲ್ಲ, ಎಂಬುದು ಸರ್ವಾನುಭೂತವಿಷಯವು.

ಅ—ಸರಿ. ವೈದ್ಯಧರ್ಮಶಾಸ್ತ್ರಗಳಿಗೆ ಇಷ್ಟು ಹತ್ತಿರದ ನೆಂಟತನವಿರುದೇ ನಿಶ್ಚಯವಾದರೆ ವೈದ್ಯವು ದೇಹಕ್ಕೆ ಬಂದ ಬಾಧೆಗಳನ್ನು ಕಳೆದು ಹಿತಾಚರಣೆಯಿಂದ ಸುಖಪಡಿಸುವುದೂ ; ಧರ್ಮವು ಪ್ರಾತಃಕಾಲ ಶೀತೋದಕಸ್ನಾನ, ಉಪವಾಸ, ಜಾಗರಾದಿಗಳಿಂದ ಕಷ್ಟಕೊಡುವುದೂ; ಏನುಕಾರಣ ? ಹೇಳಿರಿ.

ಉ—ನೀವು ಯಾವ ವೈದ್ಯವನ್ನೋ ಯಾವ ಧರ್ಮವನ್ನೋ ತಿಳಿದುಕೊಂಡು ಹೀಗೆ ನುಡಿಯು . ಅದು ಹಾಗಲ್ಲ. "ಶರೀರಕ್ಕೆ ವೈದ್ಯವೇ ಹಿತ, ಧರ್ಮವು ಅಹಿತ" ಎಂದು ನೀವೀಗ ತಿಳಿದಿರುವ ಬುದ್ಧಿಯನ್ನು ಮೊದಲು ತಿದ್ದಿಕೊಳ್ಳಿರಿ. ನಮ್ಮ ವೈದ್ಯಶಾಸ್ತ್ರ ಧರ್ಮಶಾಸ್ತ್ರಗಳೆರಡೂ ವೇದಮೂಲಗಳೇ. ಇವೆರಡರ ಕಾರ್ಯವೂ ಪ್ರಾರಂಭದಲ್ಲಿಯೂ ಪರ್ಯವಸಾನದಲ್ಲಿಯೂ ಉಭಯಲೋಕ ಸುಖಗಳನ್ನೂ ಸಾಧಿಸಿಕೊಡುವುವೇ ಆಗಿರುವಲ್ಲಿ ಆ ವಿಪರೀತಭಾವನೆಯು ನಮ್ಮ ಬುದ್ಧಿದೋಷವಲ್ಲದೆ ಶಾಸ್ತ್ರದೋಷವಲ್ಲ. ನಾವು ಹೇಳುವ ಸುಖ ಹಿತ ಎಂಬುದು ತಾತ್ಕಾಲಿಕವಲ್ಲ. ಪರಿಣಾಮದಲ್ಲಿ ಮುಂದಕ್ಕೆ ಅನುಕೂಲವಾಗುವುದೇ ಸಾತ್ವಿಕಸುಖವೆಂದು ಭಾವಿಸಿರಿ. ಆದರಲ್ಲಿ

ಯು ಉಭಯಲೋಕ ಹಿತಕರವಾದುದೇ ಸುಖವೆಂದು ಶಾಸ್ತ್ರಕಾರರ ಮತವು. ನಮ್ಮ ಕರ್ಮಗಳೆಲ್ಲವೂ ಆ ರೀತಿಯಾಗಿಯೇ ಇವೆ, ನೋಡಿರಿ. ದ್ವಿಜರು ನಿತ್ಯವು ತ್ರಿಕಾಲವಲ್ಲಿಯು ಸ್ನಾನ ಸಂಧ್ಯಾವಂದನಾದಿಗಳನ್ನು ಮಾಡಲೇ ಬೇಕೆಂದು, ಯಾವಜ್ಜೀವವು ಬಿಡಲೇ ಕೂಡದೆಂದು, ಹಾಗೆ ಮಾಡದೆ ಬಿಟ್ಟವನು ಯಾವ ವೈದಿಕ ಕರ್ಮಕ್ಕೂ ಯೋಗ್ಯನಲ್ಲವೆಂದು ಹೇಳಿದೆಯಷ್ಟೇ? ಅದು ಏತಕ್ಕೆ?

ಅ—ಆವಶ್ಯಕತೆ ತೋರಿಸುವುದಕ್ಕೆ. ಈ ಪದ್ಧತಿಯುಂಟಾಗಿರುವುದು ಈ ದೇಶದಲ್ಲಿಯೂ, ಈ ಬ್ರಾಹ್ಮಣರೆಂಬವರಲ್ಲಿಯೂ, ಕೆಲವರಲ್ಲಿ ಮಾತ್ರವೇ ಹೊರತು ಮತ್ತೆ ಬೇರೆಕಡೆ ಈ ನಿತ್ಯಕರ್ಮದ ಮಾತೇ ಇಲ್ಲ.

ಉ—ಹಾಗಲ್ಲವಯ್ಯಾ! ಈ ಕರ್ಮಭೂಮಿಯಲ್ಲಿರುವ ಬ್ರಹ್ಮ, ಕ್ಷತ್ರ, ವೈಶ್ಯ ಎಂಬ ತ್ರಿವರ್ಣದವರು ಇಹಪರ ಸುಖಾರ್ಥವಾಗಿ ಆ ಸ್ನಾನಾದಿಗಳನ್ನು ಸಮಂತ್ರಕವಾಗಿ ನಡೆಯಿಸುತ್ತ ಸ್ವಾಭಾವಿಕ ಜೀವನವಿಂದ ಆಯುರಾರೋಗ್ಯ ವಿಷಯದಲ್ಲಿ ಪರಾಪೇಕ್ಷೆಯಲ್ಲದಿರುವರು. ಉಳಿದವರು ಮಂತ್ರವಿಲ್ಲದ ಆ ತಂತ್ರಗಳನ್ನು ಮಾತ್ರ ನಡೆಯಿಸುತ್ತ ಇಹದಲ್ಲಿ ಸುಖಿಸುವರು. "ಶರೀರಯಾತ್ರಾಪಿಚತೇನಪ್ರಸಿದ್ಧ್ಯೇದಕರ್ಮಣಃ" (ಕರ್ಮಮಾಡದವಗೆ ಈ ದೇಹರಕ್ಷಣವೇ ಆಗುವುದಿಲ್ಲ) ಎಂದು ಭಗವದ್ವಚನವುಂಟಲ್ಲವೇ?

ಅ—ನಮ್ಮ ವೇದಶಾಸ್ತ್ರಗ್ರಂಥವೇ ಇಲ್ಲದ ಖಂಡಾಂತರದವರಲ್ಲಿ ಈ ನಿತ್ಯಕರ್ಮಪದ್ಧತಿಯೊಂದೂ ಕಾಣಬರುವುದಿಲ್ಲವಲ್ಲ?

ಉ—ಕಾಣದೇ ಏನು? ನಮ್ಮಲ್ಲಿರುವಂತೆಯೇ ಇಲ್ಲದಿದ್ದರೂ ಅದು ಸ್ವಭಾವಕೃತ್ಯವಾದುದರಿಂದ ಬೇರೇ ವಿಧವಾಗಿ ಅವರಲ್ಲಿ ಎಷ್ಟೋ ಕಟ್ಟಳೆ ಇದ್ದೇ ಇರುವುದು.

ಅ—ಸರಿ! ಆದರೆ, ಎಲ್ಲರೂ ಅನುಷ್ಠಾತೃಗಳೇ ಆದರು. ಇನ್ನು ಕರ್ಮಹೀನರು ಇಲ್ಲವೇ ಇಲ್ಲವೆನ್ನಬಹುದಷ್ಟೆ?

ಉ—ಹಾಗಲ್ಲ. ಅನಾರ್ಯರ ಕರ್ಮಗಳೆಲ್ಲವೂ ಕೇವಲ ಸ್ಥೂಲವೂ ವ್ಯಕ್ತವೂ ಆದ ಈ ಭೂಲೋಕಕ್ಕೆ ಮಾತ್ರ ಸೇರಿದೆ. ಆರ್ಯರ ವೈದಿಕಕರ್ಮವಾದರೋ ಸೂಕ್ಷ್ಮವೂ ಅವ್ಯಕ್ತವೂ ಆಗಿರುವ ಭುವರ್ಲೋಕ ಸುವರ್ಲೋಕಗಳಿಗೂ

ಇನ್ನೂ ಸೂಕ್ಷ್ಮತಮಗಳಾದ ಮಹೋಲೋಕಮುಂತಾದ ಊರ್ಧ್ವಲೋಕಗಳಿಗೂ ಸಂಬಂಧ ಪಟ್ಟಿದೆ ಎಂದು ತಿಳಿಯಬೇಕು

ಅ—ಅದು ಹೇಗೋ ತಿಳಿಯಲಿಲ್ಲವಲ್ಲ ?

ಉ—ಆದರೆ ಕೇಳು. ಈ ಶರೀರವು ಪ್ರತಿಕ್ಷಣದಲ್ಲಿಯೂ ಪರಿಪಾಕವಾಗುತ್ತಲೇ ಇರುವುದರಿಂದ ಯಾವಾಗಲೂ ಅನ್ನಪದಾರ್ಥವೆನಿಸಿದ ಮಲಗಳು ೧೨ ಬಗೆಯಾಗಿ ಹೊರಗೆ ಹೊರಡುತ್ತಲೇ ಇರುವುವು. ಅದರಿಂದ ಅವುಗಳನ್ನು ಚೆನ್ನಾಗಿ ಹೊರಗೆ ಹೊರಡಿಸಿ ಕಳೆದು ಆ ಮಲಸ್ಥಾನಗಳನ್ನು ಶುದ್ಧಿಗೊಳಿಸುವುದಕ್ಕಾಗಿ ಮಾಡಬೇಕಾದ ಕೆಲಸವೇ ಶೌಚಸ್ನಾನಾದಿ ನಿತ್ಯಕರ್ಮವು. ಇದು ಮನುಷ್ಯಮಾತ್ರಗೂ ಅತ್ಯಾವಶ್ಯಕವು. ಈ ಶೌಚಸ್ನಾನಾದಿ ಸಂಸ್ಕಾರವು ಪ್ರತಿನಿತ್ಯವು ನೆಡೆಯದಿದ್ದರೆ ಆ ದೇಹವೇ ಕೆಡುವುದು. ಅದರಿಂದ ಆ ನಿತ್ಯಕರ್ಮವು ಆರ್ಯಧರ್ಮ ಶಾಸ್ತ್ರರೀತಿಯಾಗಿ ಸ್ವಭಾವಕ್ಕೆ ಹಿತಕಾರಿಯಾಗುವಂತೆ ನಡೆದರೆ ಅದರಿಂದ ದೇಹವು ಶುದ್ಧವಾಗಲು ಅನ್ನಮಯ ಪ್ರಾಣಮಯ ಕೋಶಗಳು ಶುದ್ಧವಾಗುವುವಲ್ಲದೆ ಚಿತ್ತಶುದ್ಧಿಯುಂಟಾಗುವುದು. ತನ್ಮೂಲವಾಗಿ ಆ ದೇಹಸ್ಥನಾದ ಆತ್ಮಗೆ ಊರ್ಧ್ವಲೋಕ ಪ್ರಯಾಣಕ್ಕೆ ಸಹಕಾರಿಯಾಗಿರುವ ಮನೋಮಯವಿಜ್ಞಾನಮಯಾನಂದಮಯ ಕೋಶಗಳಿಗೂ ಸಹಾಯವಾಗುವುದು.

ಅ—ಆದರೆ ಆರ್ಯ ಧರ್ಮರೀತಿಯಿಂದ ಇರದೆ ಬೆರೇ ವಿಧವಾಗಿರುವವರಿಗೆ ದೇಹಶುದ್ಧಿ ಉಂಟಾಗುವುದೇ ಇಲ್ಲವೊ ?

ಉ—ಈ ವಿಧವಾಗಿ ಆಗದು. ಅದು ವೈದ್ಯಪದ್ಧತಿ ಶ್ರದ್ಧೆಯನ್ನು ಅನುಸರಿಸಿರುತ್ತದೆ. ನಮ್ಮ ಆರ್ಯಸಂಪ್ರದಾಯವು ಈ ಜಗನ್ಮೂಲವಾದ ಪ್ರಕೃತಿಮಾತೆಯ ಸ್ವಭಾವ ಪದ್ಧತಿಯನ್ನು ಅನುಸರಿಸಿದೆ. ಕೇವಲವಾಗಿ ಮನುಷ್ಯ ಮಾತ್ರರನ್ನೇ ನಂಬಿಕೊಂಡಿಲ್ಲ.

ಅ—ಅದೇನು ಹಾಗೆಂದರೆ ?

ಉ—ವೈದ್ಯರು ದಿನಚರ್ಯಾ ಋತುಚರ್ಯಾ ಪದ್ಧತಿ ಪ್ರಕಾರವಾಗಿ ದೇಹದಿಂದ ಹೊರಡುವ ಮಲಶೋಧನಾರ್ಥವಾಗಿ ವಸ್ತಿಶೌಚಸ್ನಾನಾಭ್ಯಂಗಾದಿಗಳನ್ನು, ಆರೋಗ್ಯ ಸುಖಾರ್ಥವಾಗಿ ಮಿತಾಹಾರ ವಿಹಾರಾದಿಗಳನ್ನು,

ನಿತ್ಯಕರ್ಮವನ್ನಾಗಿ ನಿಯಮಿಸಿರುವರು. ಇದು ಆರ್ಯ ಸಂಪ್ರದಾಯದ ಏಕ ದೇಶವಾಯ್ತು. ಅದು ಮೀರಿದರೆ ಔಷಧ ಪ್ರಯೋಗವನ್ನೇ ಮಾಡುವರು. ಈಗ ಸಾಮಾನ್ಯವಾಗಿ ಲೋಕರೆಲ್ಲರೂ ಈ ಪದ್ಧತಿಯಲ್ಲಿಯೇ ಇದ್ದಾರೆಂದು ತಿಳಿಯಿರಿ. ಈ ಪದ್ಧತಿಯಲ್ಲಿ ಬಹು ಪ್ರಮಾದಗಳುಂಟು.

ನಮ್ಮ ಆರ್ಯಧರ್ಮಪದ್ಧತಿಯವರಾದರೋ ಅತೀಂದ್ರಿಯಗಳಾದ ಪಾಪ ಪುಣ್ಯಗಳ ಗತಿಯನ್ನು ಕಂಡುಕೊಂಡಿರುವುದರಿಂದ ಆತ್ಮಗೆ ಮುಂದಿನ ಉನ್ನತಗತಿಗೆ ವಿರೋಧಗಳಾದ, ಅನ್ನಮಯಾದಿಕೋಶಗಳನ್ನು ಕೆಡಿಸತಕ್ಕ, ಮಲರೂಪ ಪಾಪಗಳನ್ನು ಆಗಾಗಲೇ ಎಂದರೆ ರಾತ್ರಿ ಮಾಡಿದ ಪಾಪವು ಹಗಲು, ಹಗಲು ಮಾಡಿದ ಪಾಪವು ರಾತ್ರಿ ಹೋಗುವ ಹಾಗೆ ಮಾಡತಕ್ಕ ನಿತ್ಯಕರ್ಮದಿಂದ ಕಳೆದುಕೊಳ್ಳುವ ವುಪಾಯವನ್ನು ತಪಸ್ವಿಗಳಾದ ಮುನಿ ಗಳಿಂದ ಸಂಪಾದಿಸಿಕೊಂಡಿದ್ದಾರೆ. ಈ ನಿತ್ಯ ಕರ್ಮಾಚರಣೆ ಒಂದು ದಿನ ಲೋಪವಾದ ಪಕ್ಷಕ್ಕೆ ಆಮಲಪಾಪಗಳು ಬೆಳೆಯುವುದರಿಂದ ತತ್ಪರಿ ಹಾರಕ್ಕಾಗಿ ಪ್ರಾಣಾಯಾಮ, ಏಕಭಕ್ತ, ಉಪವಾಸಾದಿ ಕೃಚ್ಛ್ರಪ್ರಾಯ ಶ್ಚಿತ್ತ ರೂಪವಾದ ಚಿಕಿತ್ಸೆಯನ್ನೂ ಏರ್ಪಡಿಸಿದ್ದಾರೆ. ಆದರಿಂದ ಯಾವಜ್ಜೀ ವವು ಬಿಡಕೊಡದೆಂದು ಹೇಳಿದೆ. ಬಿಟ್ಟರೆ ಬಿಟ್ಟಷ್ಟು (ಶಿಕ್ಷೆ) ಪ್ರಾಯಶ್ಚಿತ್ತ ವಧಿಕವಾಗುವುದು. ಅದೂ ನಡೆಯದೆ ಕರ್ಮತ್ಯಾಗವೇ ಆದ ಪಕ್ಷಕ್ಕೆ ಪತಿತ, ವ್ರಾತ್ಯ,ಎನಿಸಿಕೊಂಡು ಊರ್ಧ್ವಗತಿಗೆ ಪ್ರತಿಯಾಗಿ ಅಧೋಗತಿಗೆ ಬೀಳುವನು. ಈ ಸೂಕ್ಷ್ಮವಿಷಯವು ಆರ್ಯಧರ್ಮದ ಗರ್ಭಾಧಾನಾದಿ ಸಂಸ್ಕಾರಗಳ ಮೂಲ ವನ್ನು, ನಿತ್ಯಾಹ್ನಿಕಕರ್ಮತತ್ತ್ವವನ್ನೂ, ವಿಚಾರಿಸಿದರೆ ಸ್ಪಷ್ಟವಾಗುವುದು.

ಅ—ಹಾಗಾದರೆ ಮೊದಲು ನಿತ್ಯಾಹ್ನಿಕಕರ್ಮತತ್ತ್ವವನ್ನೂ ಆ ಸಂಸ್ಕಾರ ಗಳ ಮೂಲವನ್ನೂ ತಿಳಿಸಬೇಕು.

ಉ—ಅವನ್ನು ಒಂದೆರಡು ಮಾತಿನಿಂದ ತಿಳಿಸಲು ಶಕ್ಯವಲ್ಲ. ಅದಕ್ಕಾಗಿ ಬೇರೆ ಸದ್ವೃತ್ತರತ್ನಾವಳಿಯು "ಆರ್ಯಧರ್ಮಸಾರ" ವೆಂಬ ತರಲಮಣಿಯ ಕರ್ಮಭಾಗದಲ್ಲಿ ವಿಮರ್ಶೆಮಾಡಿರುವುದನ್ನು ನೋಡಬಹುದು.

ಅ—ಆದರೆ—ಈಗ ಅದನ್ನೇ ಹೇಳಬೇಕು? ಉ—ನಾಳೆ ಹೇಳುವೆನು.

---

ಈ ಕಾರಣದಿಂದಲೂ, ವಿಷಯಗೌರವದಿಂದಲೂ, ಉಂಟಾದ ಈ ಗ್ರಂಥಗೌರವವನ್ನು ಸಹಿಸಬೇಕು. ಪ್ರಕೃತದಲ್ಲಿ ಕೆಲವುಕಾಲ ಜನಕ್ಕೆ ಈ ಧರ್ಮಮೂಲವು ಮನಸ್ಸಿಗೆ ಬರುವವರೆಗು ಹೀಗೆ ವಿವರಿಸುತ್ತ ಬಂದು ಮುಂದಕ್ಕೆ ಬೇಕಾದರೆ ಸಂಗ್ರಹಿಸಿಕೊಳ್ಳಬಹುದೆಂಬ ಉದ್ದೇಶದಿಂದ ಪ್ರಶ್ನೆಯುಂಟಾದ ಹಾಗೆಲ್ಲ ಉತ್ತರವಿಷಯವು ವಿಸ್ತರಿಸಲ್ಪಟ್ಟದೆ. ಅದರಲ್ಲಿ ಅಧಿಕವೆಂದು, ಅನವಶ್ಯವೆಂದು, ತೋರಬಂದ ಪಕ್ಷದಲ್ಲಿ ಅಂತಹ ಪ್ರಶ್ನಭಾಗವನ್ನು ಬಿಟ್ಟು ಮುಂದುಮುಂದಣ ಪ್ರಶ್ನಭಾಗಗಳನ್ನು ಪರಿಗ್ರಹಿಸಬಹುದು.

ಮುಖ್ಯವಾಗಿ ಈ ಸನಾತನಾರ್ಯಧರ್ಮಕಲ್ಪವೃಕ್ಷದ ನೀತಿ ಸದಾಚಾರ ಬೀಜಗಳನ್ನು ಆರ್ಯಕುಲಪುತ್ರರ ಮಾನಸಪ್ರದೇಶದಲ್ಲಿ ನೆಡುವುದಕ್ಕೆ ಇದು ಸಕಾಲವಾಗಿರುವುದರಿಂದ ಆ ಬೀಜಕ್ಷೇತ್ರಗಳ ಅನುರೂಪ್ಯವನ್ನು ಆರ್ಯರೆಲ್ಲರೂ ಆಲೋಚಿಸಿ, ಈ ಪ್ರಶ್ನೋತ್ತರಗಳಲ್ಲಿ ಬಾಲರ ಬಾಲಿಕೆಯರ ತರಗತಿ ಯೋಗ್ಯತಾದಿಗಳಿಗೆ ತಕ್ಕತಕ್ಕವುಗಳನ್ನು ಆಯ್ದುಕೊಂಡು, ಅವರ ಮನಸ್ಸಿಗೆ ತಿಳಿವಂತೆ ಉಪನ್ಯಾಸಮಾಡುತ್ತ, ಶ್ರದ್ಧಾಸಂಪಾದನಾರ್ಥವಾಗಿ ದೀರ್ಘಾಯುಷ್ಸೂತ್ರವಿಧಿಗಳನ್ನು ಉದಾಹರಿಸುತ್ತ, ಸರ್ವವಿಧದಿಂದಲು ಸದಾಚಾರ ಧರ್ಮನೀತಿಗಳನ್ನು ಆಚರಣೆಗೆ ತರುತ್ತ ಬರಬೇಕೆಂದು ಪ್ರಾರ್ಥನೆ.

ಈಗ ಈ ಪ್ರಶ್ನೋತ್ತರರೂಪಗ್ರಂಥದಲ್ಲಿ ಯಲ್ಲಿಯಾದರೂ ವೈಚಿತ್ರ್ಯವು, ಸಾಮಂಜಸ್ಯವು, ತಪ್ಪಿ ಅಧಿಕಾರಿಕಾಲದೇಶಾದಿ ವಿರೋಧವು ತೋರಬಂದರೆ ಈ ಪ್ರಶ್ನೋತ್ತರಗಳು ಪ್ರವರ್ತಿಸಿರುವ ರೀತಿಯನ್ನು, ಮುಂದೆ ಬರುವ ಧರ್ಮಾವತಾರಿಕೆಯನ್ನು, ಕಡೆಗೂ ನೋಡಿ ಆಕ್ಷೇಪ್ಯಾಂಶಗಳಿಗೆ ಪರಿಹಾರವು ದೊರೆಯದಿದ್ದರೆ ಆ ದೋಷಗಳನ್ನೂ, ಇನ್ನೂ ನ್ಯೂನಾತಿರೇಕಾದ್ಯಂಶಗಳನ್ನೂ, ಪರಿಶೋಧಿಸಿ ಗ್ರಾಹ್ಯಾಗ್ರಾಹ್ಯಾಂಶವನ್ನು ವಿಂಗಡಿಸಿ ನಿರ್ಮತ್ಸರರಾದ ಉಪಾಧ್ಯಾಯರು, ಸನ್ಮಾರ್ಗಬೋಧಕರು, ದಯೆಯಿಂದಲೂ ಲೋಕೋಪಕಾರ ಸರ್ವದೃಷ್ಟಿಯಿಂದಲೂ ನನಗೆ ತಿಳಿಸುತ್ತ ಅನುಗ್ರಹಿಸಬೇಕೆಂದು ಸವಿನಯಂ ಬಾರಿಬಾರಿಗೂ ಪ್ರಾರ್ಥಿಸುವೆನು.

ಬೆಂಗಳೂರು ಚಾಮರಾಜಪೇಟೆ,
ತಾ॥ ೨೯–೯–೧೯೦೯.

ಇಂತು ಬಿನ್ನವಿಸುವ,
ಗ. ವೈ. ಕೃಷ್ಣಾಚಾರ್ಯ.